# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ದಾನಧರ್ಮಗಳನ್ನು ಮಾಡುವುದು. ಹತ್ತು ಜನರು ಪುಣ್ಯಶಾಲಿಗಳಾಗುವಂತೆ ಮಾಡುವುದು ಒಳ್ಳೆಯತನಗಳೆಂದು ಗೊತ್ತಿದ್ದರೂ ತಮ್ಮ ಬೆನ್ನು ತಮಗೆ ಕಾಣುವುದಿಲ್ಲವೆಂಬಂತೆ ವರ್ತಿಸುವವರು ಅನೇಕರಿದ್ದಾರೆಂಬುದನ್ನು ಈ ಸಂಚಿಕೆಯಲ್ಲಿರುವ "ಯಾತ್ರೆಯ ಫಲ" ಎಂಬ ಕಥೆಯಲ್ಲಿ ನೋಡಬಹುದು.

ಇನ್ನೊಂದು ವಿಶೇಷ, ಚಂದಮಾಮನ ಕಳೆದ ಸಂಚಿಕೆಯ ಪೂರ್ತಿ ಚಿತ್ರಗಳೂ ಮಲ್ಟೀಕಲರಿನಲ್ಲಿ ಅಚ್ಚಾಗಿವೆಯಷ್ಟೇ? ಇನ್ನು ಮುಂದೆ ಹೀಗೆಯೇ ಪೂರ್ತಿ ವರ್ಣಚಿತ್ರಗಳೊಂದಿಗೆ ರಂಜಿಸುತ್ತಾನೆ "ಚಂದಮಾಮ"

## ಅಮರವಾಣಿ

ಅರ್ಥ ಹಾನಿಶ್ಚಾವಮಾನಶ್ಚ ಗೃಹಚ್ಛಿದ್ರಾಧಿಕಂ ತದಾ
ವಂಚನಾ ವಂಚಿತಾನಾತ್ಮನಿರ್ ಪ್ರಕಾಶ್ಯಾದಿ ಸರ್ವದಾ

ಧನ ಹೋದರೂ, ಅವಮಾನವಾದರೂ, ಮನೆಯೊಳಗೆ ಕಲವರಗಳಿದ್ದರೂ, ತನ್ನಿಂದ ಇತರರಿಗೋ ಇತರರಿಂದ ತನಗೋ ಮೋಸವಾದರೂ ಇತರರೊಂದಿಗೆ ಹೇಳಿಕೊಳ್ಳಬಾರದು.

ಸಂಪುಟ : ೭೧ ಜುಲೈ '೮೩ ಸಂಚಿಕೆ : ೧

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦





# ಅಗತ್ಯವಾದ ಆಭರಣ

ಒಂದು ದಿನ ರಾತ್ರಿ ಎಂಟು ಗಂಟೆಯ ಸುಮಾರಿಗೆ ಆಕಸ್ಮಾತ್ತಾಗಿ ದೊಡ್ಡ ಮಳೆ ಪ್ರಾರಂಭವಾಯಿತು. ಜತೆಗೆ ಗಾಳಿಯೂ ಇದ್ದುದರಿಂದ ಗಂಗಾಧರನು ಓಡಿ ಬಂದು ಹೊರಬಾಗಿಲನ್ನು ಮುಚ್ಚಿ, ಕಿಟಿಕಿಗಳ ಬಾಗಿಲನ್ನೂ ಹಾಕಿದನು. ಹೊರಗೆ ಅಲ್ಲೋಲ ಕಲ್ಲೋಲ ಮಾಡುತ್ತಿರುವ ಗಾಳಿಮಳೆ ಗುಡುಗುಗಳ ಗದ್ದಲಗಳಿಗೆ ಗಂಗಾಧರನ ಆರು ವಯಸ್ಸಿನ ಮಗಳು ವಿದ್ಯಾ ಹೆದರಿ ಓಡಿ ತಾಯಿಯನ್ನು ಗಟ್ಟಿಯಾಗಿ ಅಪ್ಪಿಕೊಂಡಳು.

"ಹೆದರಬೇಡಮ್ಮಾ! ಅದೇನೂ ಮಾಡದು" ಎಂದು ಹೇಳುತ್ತಾ, ಗಂಗಾಧರನು ಮಗಳನ್ನು ತಾನು ಎತ್ತಿಕೊಂಡನು.

ಅಷ್ಟರಲ್ಲಿ ಯಾರೋ ಬಾಗಿಲನ್ನು ಬಡಬಡನೆ ಹೊಡೆಯುವ ಶಬ್ದ ಕೇಳಿತು.

ಗಂಗಾಧರನು ಹೋಗಿ ಬಾಗಿಲು ತೆರೆದನು. ಮಳೆಯಲ್ಲಿ ನೆನೆದು ಅವನ ಮಿತ್ರ ಸತ್ಯನಾರಾಯಣನೂ, ಇನ್ನೊಬ್ಬನೂ ಒಳಗೆ ಬಂದರು. ಸತ್ಯನಾರಾಯಣನನ್ನು ನೋಡಿ, ವಿದ್ಯಾ ಹೆದರಿಕೆ ಕಳೆದುಕೊಂಡು ನಗುತ್ತ ಮುಖ ಅರಳಿಸಿದಳು. ಸತ್ಯನಾರಾಯಣನೂ ಗಂಗಾಧರನೂ ಚಿಕ್ಕಂದಿನ ಗೆಳೆಯರು. ಸತ್ಯನಾರಾಯಣನಿಗೆ ಪಟ್ಟಣದಲ್ಲಿ ಉದ್ಯೋಗ.

ಗಂಗಾಧರನು ಉತ್ಸಾಹದಿಂದ ಹೆಂಡತಿಯನ್ನು ನೋಡಿ, "ಗಾಯತ್ರೀ. ನೋಡಿದಿಯಾ ನಿನ್ನಣ್ಣ ಬಂದ" ಎಂದು ಕೂಗಿ ಹೇಳಿದನು. ಬಂದವರಿಬ್ಬರೂ ಒದ್ದೆಯಾಗಿರುವುದನ್ನು ನೋಡಿ ಗಾಯತ್ರಿ ಅವರಿಗೆ ಒಣಗಿದ ಬಟ್ಟೆಗಳನ್ನು ತಂದುಕೊಟ್ಟಳು.

ಸತ್ಯನಾರಾಯಣನು ಬಟ್ಟೆಗಳನ್ನು ಬದಲಾಯಿಸಿ "ಅಗತ್ಯ ಕೆಲಸಕ್ಕಾಗಿ ರಂಗಾಪುರದವರೆಗೆ ಹೊರಟಿದ್ದೆ. ದಾರಿಯಲ್ಲಿ ಥಕ್ಕನೆ ಶುರುವಾಯ್ತು ಈ ಮಳೆ. ಇವನು ದಾರಿಯಲ್ಲಿ ಸಿಕ್ಕಿದ. ಪಟ್ಟಣದಲ್ಲಿ ಹತ್ತಿರದ ಮನೆಯಲ್ಲಿರುವವನು" ಎಂದು ಸತ್ಯನಾರಾಯಣನು ತನ್ನೊಂದಿಗಿದ್ದವನನ್ನು ಅವರಿಗೆ ಪರಿಚಯಮಾಡಿಸಿದನು. ಗಾಯತ್ರಿ ಅತಿಥಿಗಳಿಗೆ ಬಿಸಿಬಿಸಿ ಅಡಿಗೆ ತಯಾರುಮಾಡಿದಳು. ಊಟ ಉಪಚಾರಗಳೆಲ್ಲ ಆದ ಮೇಲೆ ಬಂದವರಿಗೆ ಹೊರಗಿನ ಕೋಣೆಯಲ್ಲಿ ಮಲಗಲು ಹಾಸಿಗೆ ಸಿದ್ಧಪಡಿಸಿಕೊಟ್ಟರು.

"ನಾನು ಮಾವನ ಹತ್ರ ಕಥೆ ಕೇಳುತ್ತಾ ಮಲಗುತ್ತೇನೆ" ಎಂದು ಪಟ್ಟು ಹಿಡಿದಳು ವಿದ್ಯಾ.

ಎಂ. ಕೆ. ಈಶ್ವರರಾವ್



"ಆಗಲೇ ತುಂಬಾ ಹೊತ್ತಾಯಿತು. ಮಾವಯ್ಯ ನಡೆದು ನಡೆದು ಬಳಲಿದ್ದಾರೆ. ಕಥೆ ಕಥೆ ಅಂತ ಅವರನ್ನು ತೊಂದರೆ ಪಡಿಸ ಕೂಡದು" ಎಂದಳು ಗಾಯತ್ರಿ ಮಗಳೊಂದಿಗೆ ಕೋಪದಿಂದ.

"ಪರ್ವಾಗಿಲ್ಲ ಬಿಡಮ್ಮ, ವಿದ್ಯಾ ನಿದ್ದೆ ಮಾಡು ವವರೆಗೂ ಕಥೆ ಹೇಳುತ್ತೇನೆ" ಎಂದನು ಸತ್ಯ ನಾರಾಯಣ.

ವಿದ್ಯಾ ಉತ್ಸಾಹದಿಂದ ಬಂದು ಸತ್ಯನಾರಾಯಣನ ಪಕ್ಕದಲ್ಲಿ ಮಲಗಿದಳು. ಅವನು ಹೇಳುವ ಕಥೆಯನ್ನು ಕೇಳುತ್ತ, ಒಂದು ಗಂಟೆಯ ಮೇಲೆ ತನ್ನಂತೆ ನಿದ್ದೆಗೆ ವಾಲಿದಳು. ಬಳಲಿದ ಸತ್ಯನಾರಾಯಣನಿಗೂ ಒಳ್ಳೆಯ ನಿದ್ದೆ ಹಿಡಿಯಿತು. ಅವನಿಗೆ ಎಚ್ಚರ ವಾದಾಗ ಬೆಳಗಾಗಿತ್ತು.

ಆಗಲೇ ನಿದ್ದೆಯಿಂದ ಎದ್ದು ಕುಳಿತಿದ್ದ ಕೋದಂಡನು, ಸತ್ಯನಾರಾಯಣನು ಎದ್ದ ಕೂಡಲೇ, "ನೀನು ಸ್ವಲ್ಪ ಹೊತ್ತು ಇದ್ದು ಆಮೇಲೆ ಬಾ. ನಾನು ಹೋಗಿ ಬಿಡುತ್ತೇನೆ, ಕೆಲಸವಿದೆ" ಎಂದನು.

ವಿದ್ಯಾನಿದ್ದೆಯಿಂದೆದ್ದರೆ ತನ್ನನ್ನು ಬಿಡಲಾರಳೆಂದು ಸತ್ಯನಾರಾಯಣನಿಗೆ ಗೊತ್ತು. ಆದುದರಿಂದ ಅವನೂ ಆಗಲೇ ಹೊರಡಲು ತಯಾರಾದನು. ಗಂಗಾ ಧರನೂ, ಗಾಯತ್ರಿಯೂ ಊಟ ಮಾಡಿದ ಮೇಲೆ ಹೋಗಬಹುದೆಂದು ಒತ್ತಾಯ ಮಾಡಿದರೂ ಅವರಿಬ್ಬರೂ ಕೇಳಲಿಲ್ಲ. ಇಬ್ಬರೂ ಹೊರಟು ಹೋದರು. ಮಾರುದ್ದ ಹೊತ್ತೇರಿದ ಮೇಲೆ ವಿದ್ಯಾ ಎದ್ದು, "ಸತ್ಯಾ ಮಾವ ಎಲ್ಲಿ?" ಎಂದು ಕೇಳುತ್ತಾ ಮನೆಪೂರಾ ಹುಡುಕಿ ಓಡಾಡುವಾಗ, ಗಾಯತ್ರಿ ಅವಳನ್ನು ಎತ್ತಿಕೊಂಡು, "ಮಾವ ನಿನಗೆ ಚೆಂದವಾದ ಬೊಂಬೆ ತರುತ್ತೇನೆ ಅಂತ ಹೇಳಿ ಅಂಗಡಿಗೆ ಹೋಗಿದ್ದಾರೆ" ಎಂದಳು.

ಆಮೇಲೆ ಅವಳು ಮಗಳ ಮುಖ ತೊಳೆಯಿಸು ವಾಗ ಅವಳ ಖಾಲಿ ಕುತ್ತಿಗೆಯನ್ನು ನೋಡಿ ಗಾಬರಿಯಾಗಿ, "ಸರ ಎಲ್ಲಿಯೇ?" ಎಂದಳು. ಅತ್ತೆಯವರು ತಮ್ಮ ಮೂರುವರೆ ಪವನಿನ ನಗವನ್ನು ಕರಗಿಸಿ ಮೊಮ್ಮಗಳಿಗೆ ಎರಡೆಳೆಯ ಯಾಲಕ್ಕೀ ಸರ ಮಾಡಿಸಿದ್ದರು. ಅದೀಗ ಕಾಣುವುದಿಲ್ಲವೆಂದರೇನು? ದೊಡ್ಡವಳಾದ ಮೇಲೆ ಹಾಕೊಳ್ಳಬೇಕು ಅಂದರೆ ಕೇಳಲಿಲ್ಲ ವಿದ್ಯಾ. ಬೇಕು ಬೇಕು ಅಂತ ಹಟ ಹಿಡಿದುದರಿಂದ ನಿನ್ನೆ ಸಂಜೆ ಇವಳ ಕೊರಳಿಗೆ ಅದನ್ನು ಹಾಕಿದ್ದಳು.

ಗಾಯತ್ರಿ ಬೇಗಬೇಗನೆ ಮುಂದಿನ ಕೋಣೆಗೆ ಹೋಗಿ ವಿದ್ಯಾ ಮಲಗಿದ್ದ ಹಾಸಿಗೆಯನ್ನು ಕೊಡರಿ ನೋಡಿದಳು. ಸರದ ಜಾಡು ಕಾಣಲೇ ಇಲ್ಲ. ಗಾಯತ್ರಿಗೆ ಕಣ್ಣೀರು ತುಂಬಿಕೊಂಡಿತು. ಅತ್ತೆ ಯವರು ಅವರ ಮದುವೆಯ ಕಾಲದ ಬಳೆಗಳನ್ನು ಕರಗಿಸಿ ಬಹಳ ಪ್ರೀತಿಯಿಂದ ಮಾಡಿಸಿದ ಸರವದು. ಅದು ಹೋಯಿತೆಂದು ತಿಳಿದರೆ ಅವರಿಗೆ ಎಷ್ಟು ಸಂಕಟವಾಗಬೇಡ! ಒಂದು ವಾರದಲ್ಲಿ ಮೊಮ್ಮಗ



ವಿದ್ಯಾಳಿಗೆ ಬೊಂಬೆಯೊಂದನ್ನು ಹಿಡಿದುಕೊಂಡು ಸತ್ಯನಾರಾಯಣನು ಮತ್ತೆ ಅಲ್ಲಿಗೆ ಬಂದನು.

ಗಂಗಾಧರನು ಸತ್ಯನಾರಾಯಣನೊಂದಿಗೆ ನಡೆದ ಸಂಗತಿಯನ್ನು ಹೇಳಿ, "ಆ ಸರವನ್ನು ನೀನು ತೆಗೆದಿಟ್ಟಿರುವಿಯೇನೋ ಎಂದು ಅಂದುಕೊಂಡೆವು. ಇದೊಂದೇ ಆಸೆ" ಎಂದನು.

ಸತ್ಯನಾರಾಯಣನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಬಹುಶಃ ಈ ಕೆಲಸ ಆ ಕೋದಂಡನದೇ ಇರಬೇಕು." ಎಂದನು.

"ಅವನು ಅಂಥವನೆ?" ಎಂದನು ಗಂಗಾಧರ ಆಶ್ಚರ್ಯದಿಂದ.

"ಅವನೊಡನೆ ನನಗೆ ಸಾಧಾರಣ ಮುಖ ಪರಿಚಯದ ಹೊರತು ಒಳ ಹೊರಗೆಲ್ಲಾ ತಿಳಿದಿರುವವ ನಲ್ಲ. ಯಾವುದಕ್ಕೂ ನೀನೂ ನನ್ನೊಂದಿಗೆ ಬಾ. ಅವನ ಮನೆಗೇ ಹೋಗಿ ಕೇಳೋಣ. ಅಗತ್ಯ ಬಿದ್ದರೆ ಬೆದರಿಸಿಯಾದರೂ ವಿಚಾರಿಸೋಣ" ಎಂದನು ಸತ್ಯನಾರಾಯಣ.

ಇಬ್ಬರೂ ಪಟ್ಟಣಕ್ಕೆ ಹೋಗಿ ಸೇರಿದಾಗ ಮಧ್ಯಾಹ್ನವಾಯಿತು. ಊಟ ಮುಗಿಸಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಮಧ್ಯಾಹ್ನ ತಿರುಗಿದ ಮೇಲೆ ಕೋದಂಡನ ಮನೆಗೆ ಹೋದರು.

ಆ ಸಮಯದಲ್ಲಿ ಕೋದಂಡನು ಮನೆಯ ಮುಂದಿರುವ ತರಕಾರಿ ಗಿಡಗಳಿಗೆ ನೀರು ಎರೆಯು ತ್ತಿದ್ದನು. ಅವನು ಸತ್ಯನಾರಾಯಣ, ಗಂಗಾಧರರನ್ನು ನೋಡಿದ ಕೂಡಲೇ, ಕ್ಷಣಕಾಲ ಬೆರಗಾಗಿ, ಅಷ್ಟರಲ್ಲೇ ಸಮಾಳಿಸಿಕೊಂಡು, "ಬನ್ನಿ ಬನ್ನಿ, ಆಕಸ್ಮಿಕ ಅತಿಥಿ ಗಳು!" ಎಂದು ಸ್ವಾಗತ ಹೇಳಿದನು.

ಸತ್ಯನಾರಾಯಣನು ಅವನೊಂದಿಗೆ, "ಇಲ್ಲಿಯ ಕೋತ್ವಾಲ ಶಾಖೆಯಲ್ಲಿ ಸರದಾರನಾಗಿ, ನಮ್ಮ ಈ ಗಂಗಾಧರನ ಚಿಕ್ಕಮ್ಮನ ಮಗನಿದ್ದಾನೆ. ಅವರ ಮನೆಯ ಶುಭಕಾರ್ಯಕ್ಕೆ ಇವನು ಬಂದಿದ್ದಾನೆ.

ಳನ್ನು ನೋಡಲಿಕ್ಕೆ ಬರುವೆನೆಂದು ಪತ್ರ ಬೇರೆ ಬರೆ ದಿದ್ದಾರೆ! ಬಂದ ಕೂಡಲೇ ಆ ಸರವನ್ನೇ ಕೇಳುತ್ತಾರೆ.

ಹೆಂಡತಿಯಿಂದ ಎರಡೆಳೆಯ ಯಾಲಕ್ಕೀಸರ ಕಾಣೆಯಾಯಿತೆಂದು ತಿಳಿದು ಗಂಗಾಧರನೂ ಮನೆಯ ಮೂಲೆ ಮುಡುಕು ಪೂರಾ ಹುಡುಕಿದನು, ಪ್ರಯೋ ಜನವೇನೂ ಆಗಲಿಲ್ಲ.

ಗಾಯತ್ರಿ ಅನ್ನ ನೀರು ಬಿಟ್ಟು ಚಿಂತಿಸುತ್ತ, "ರಾತ್ರಿ ಬೆಳಗಾಗುವುದರೊಳಗೆ ಚಿನ್ನದ ಸರ ಮಾಯ ವಾಗುವುದೆಂದರೆ ಏನಪ್ಪಾ ಇದು! ಒಂದು ವೇಳೆ ಸತ್ಯಾಣ್ಣ ಮಗು ನಿದ್ದೆಯಲ್ಲಿರುವಾಗ ಸರ ಕುತ್ತಿಗೆಗೆ ಚುಚ್ಚಿಕೊಳ್ಳುವುದೆಂದುಕೊಂಡು ಅದನ್ನು ತೆಗೆದು ಎಲ್ಲಿಯಾದರೂ ಅಡಗಿಸಿಟ್ಟನೋ? ನಮ್ಮ ಹತ್ತಿರ ಹೇಳಲು ಮರೆತನೋ?" ಎಂದಳು.

ಇದ್ದರೂ ಇದ್ದೀತೆಂದು ತೋರಿತು ಗಂಗಾಧರನಿಗೆ. ಈ ಒಂದೇ ಒಂದು ಆಸೆ ಮಾತ್ರ ಉಳಿದಿತ್ತು. ಎರಡು ದಿನಗಳ ಮೇಲೆ ಹಿಂದಿರುಗಿ ಬರುವಾಗ,



ಹಾಗೆಯೇ ನಿನ್ನನ್ನೂ ನೋಡಿ ಹೋಗುತ್ತೇನೆಂದ. ಅದಕ್ಕೇ ಕರಕೊಂಡು ಬಂದೆ" ಎಂದನು.

ಕೋದಂಡನು ಅವರನ್ನು ಮುಂದಿನ ಕೋಣೆಯಲ್ಲಿ ಕುಳಿತುಕೊಳ್ಳಲು ಹೇಳಿ, ಒಳಗೆ ಹೋಗಿ ಹೆಂಡತಿಯ ಹತ್ತಿರ, "ನಮ್ಮ ಹುಡುಗಿ ಎಲ್ಲಿ?" ಎಂದು ಕೇಳಿದನು.

"ಎಲ್ಲಿಯೋ ಆಡಿಕೊಂಡಿದ್ದಾಳು ಏಕೆ?" ಎಂದಳು ಹೆಂಡತಿ.

ಕೋದಂಡನು ಗಾಬರಿಯಿಂದ, "ನೀನು ಕೂಡಲೇ ಹಿಂದಿನ ಬಾಗಿಲಲ್ಲಿ ಹೋಗಿ ಅವಳ ಕೊರಳಲ್ಲಿರುವ ಆ ಸರ ತೆಗೆದುಕೊಂಡು ಬಾ. ಬೇಗ. ಇವರು ಹೀಗೆ ಬರುವರೆಂದು ನಾನೇನು ಕಂಡೆ?" ಎಂದನು.

"ಹಾಗೆ ಗಾಬರಿಗೇನಾಯಿತು ಮಹಾ? ಕತ್ತಲೆಯಾಗುವುದರೊಳಗೆ ಹುಡುಗಿ ಬಾರದಿರುತ್ತಾಳೆಯೇ?" ಎಂದಳು ಹೆಂಡತಿ.

"ಮೊದಲು ಹೇಳಿದ ಹಾಗೆ ಮಾಡು. ಇವರು ಕೋತ್ವಾಲರ ಸಂಬಂಧಿಕರೆಂದು ಕಾಣುತ್ತದೆ." ಎಂದು ಕೋಪದಿಂದ ಹೆಂಡತಿಯನ್ನು ಅವಸರಪಡಿಸಿದನು.

ಹೊರಗೆ ಹೋದ ಅವನ ಹೆಂಡತಿ ಸ್ವಲ್ಪ ಹೊತ್ತಿನಲ್ಲಿ ಭಯ ಗಾಬರಿಗಳಿಂದ ಅಳುತ್ತಾ ಓಡಿ ಬಂದು, "ಅಯ್ಯೋ! ನಮ್ಮ ಮಗಳನ್ನು ಯಾರೋ ಕರಕೊಂಡು ಹೋದರಂತೆ. ಬೀದಿಯಲ್ಲಿ ಆಡುತ್ತಿದ್ದ ಹುಡುಗರು ಹೇಳಿದರು. ಯಾವನೋ ಗಡ್ಡದವ ಮಿಠಾಯಿ ಕೊಡ್ತೇನೇ ಅಂತ ಹೇಳಿ ನಮ್ಮ ಮಗಳನ್ನು ಹೊತ್ತುಕೊಂಡು ಹೋದನಂತಯ್ಯೋ! ಏನು ಮಾಡ್ಲೀ? ಆ ಚಿನ್ನದ ಸರ ಕದೀಲಿಕ್ಕೇ ಹಾಗೆ ಮಾಡಿದ್ದಾನೆ! ಎಲ್ಲಿ ಹುಡುಕಲೀ!..."

ಚಿನ್ನದ ಸರದ ಮಾತು ಕೇಳುತ್ತಲೇ ಕೋದಂಡನಿಗೆ ಚೇಳು ಕುಟುಕಿದಂತಾಗಿ, ಹೆದರಿ ನಡುಗಿ ಹೆಂಡತಿಯ ಬಾಯಿ ಮುಚ್ಚಿಸಲು ನೋಡಿದನು, ಸಾಧ್ಯವಾಗಲಿಲ್ಲ. ಈ ಘಸಮುಸ ಗಾಬರಿಗಳನ್ನು ನೋಡಿ ಸತ್ಯನಾರಾಯಣನು ಅವರ ಹತ್ತಿರ ಬಂದು, "ಮಕ್ಕಳ ಮೈಮೇಲೆ ಚಿನ್ನಾಭರಣ ಹಾಕಿ ಬೀದಿಗೆ ಕಳಿಸಲೇ ಬಾರದು. ಅದು ಗಂಡಾಂತರವನ್ನು ಮನೆಗೆ ಕರೆದ ಹಾಗೆ. ಆ ಚಿನ್ನದ ಸರ ಹೇಗಿದ್ದಿತೆಂಬುದನ್ನು ವಿವರಿಸಿ ಕೋತ್ವಾಲರಿಗೆ ಫಿರ್ಯಾದಿ ಮಾಡೋಣ. ಹೀಗೆ ಗಾಬರಿಯಾಗಿ ಸುಮ್ಮನಿದ್ದರೆ ಏನು ಪ್ರಯೋಜನ?" ಎಂದನು. ಹಿಂದೆಯೇ ಗಂಗಾಧರನೂ ಇದ್ದನು.

ಫಿರ್ಯಾದಿ ಎಂಬ ಶಬ್ದ ಕೇಳಿದ ಕೂಡಲೇ ಕೋದಂಡನಿಗೆ ಮೈ ಪೂರಾ ಬೆವರ ತೊಡಗಿತು. ತಾನು ವಿದ್ಯಾಳ ಕೊರಳಲ್ಲಿದ್ದ ಚಿನ್ನದ ಸರವನ್ನು ಕದ್ದ ಸಂಗತಿ ಹೇಗಿದ್ದರೂ ಹೊರಗೆ ಬೀಳುತ್ತದೆ. ಅದು ಕೋತ್ವಾಲ ಕಚೇರಿಗೆ ತಿಳಿದುಬಿಟ್ಟರೆ ತನಗೆ ಜೇಲು ವಾಸ ಖಂಡಿತವೇ.

ಕೋದಂಡನು ನಡುಗುವ ಕೈಗಳಿಂದ ಗಂಗಾಧರನ ಕೈಗಳನ್ನು ಗಟ್ಟಿಯಾಗಿ ಹಿಡಿದು, ನಡುಗುವ ಕಂಠದಿಂದ, "ನೀವಿಬ್ಬರೂ ನನ್ನನ್ನು ಕ್ಷಮಿಸಬೇಕು.

ನಮ್ಮ ಮಗಳ ಕುತ್ತಿಗೆಯಲ್ಲಿದ್ದ 'ಚಿನ್ನದ ಸರ ನಿಮ್ಮ ವಿದ್ಯಾಕಳದೇ. ರಾತ್ರಿಯಲ್ಲಿ ನಾನು ಕದ್ದುಬಿಟ್ಟೆನು. ನನ್ನ ಹೆಂಡತಿ ಮಗಳಿಗೆ ಒಂದು ಚಿನ್ನದ ಸರ ಮಾಡಿಸಬೇಕು ಅಂತ ದಿನಾ ನನ್ನ ಪ್ರಾಣ ಹಿಂಡುತ್ತಾ ಇದ್ದಳು. ನನಗೆ ಅಷ್ಟೊಂದು ಶಕ್ತಿ ಇಲ್ಲ. ದಯಮಾಡಿ ಕೋತ್ವಾಲರವರಿಗೆ ಹೋಗಬೇಡಿ. ಮತ್ತೆ ಊರಲ್ಲಿ ಮುಖವೆತ್ತಲೂ ಸಾಧ್ಯವಾಗದು" ಎಂದು ಬೇಡಿಕೊಂಡನು.

ಗಂಗಾಧರನು ಸೌಮ್ಯವಾಗಿಯೇ ಹೇಳಿದನು: "ನೋಡು ಕೋದಂಡಾ. ಹೆಂಡತಿಗೆ ತಕ್ಕ ಹಾಗೆ ಹೇಳಲಾಗದೆ ಹೋದರೆ ಹೀಗೆಯೇ ಅನರ್ಥ ಉಂಟಾಗುತ್ತದೆ. ಮಕ್ಕಳಿಗೆ ನಿಜವಾದ ಆಭರಣಗಳೆಂದರೆ ವಿದ್ಯೆಯೇ. ಚಿಕ್ಕತನದಲ್ಲಿಯೇ ಅವರಿಗೆ ಚಿನ್ನದ ಮೇಲೆ ಮೋಹಬರುವ ಹಾಗೆ ಮಾಡಬಾರದು. ಮೊದಲು ನಿನ್ನ ಮಗಳ ಗತಿ ಏನಾಗಿದೆಯೋ ನೋಡಬೇಕು. ಹುಡುಕೋಣ ನಡೆ." ಎಂದನು.

ಅಷ್ಟರಲ್ಲಿ ಮಿಠಾಯಿ ಪೊಟ್ಟಣದೊಂದಿಗೆ ಕೋದಂಡನ ಮಗಳು ಓಡುತ್ತಾ ಬಂದಳು. ಆ ಹುಡುಗಿಯ ಕೊರಳಿನಲ್ಲಿರುವ ಚಿನ್ನದ ಎರಡೆಳೆಯ ಯಾಲಕ್ಕೀ ಸರವನ್ನು ನೋಡಿದ ಕೂಡಲೇ ಎಲ್ಲರ ಮುಖಗಳೂ ಸಂತೋಷದಿಂದ ವಿಕಸನವಾದುವು. ಕೋದಂಡನ ಹೆಂಡತಿ ಅತ್ಯಂತ ಸಂತೋಷದಿಂದ, "ಎಲ್ಲಿಗೆ ಹೋದೆಯೇ ಅಮ್ಮ! ಯಾರೋ ಗಡ್ಡದವನು ನಿನ್ನನ್ನು ಎತ್ತಿಕೊಂಡು ಹೋದನಂತಲ್ಲಾ?" ಎಂದು ಮಗಳನ್ನು ಎತ್ತಿಕೊಂಡಳು.

ಆ ಹುಡುಗಿ ಮಿಠಾಯಿ ಪೊಟ್ಟಣ ಬಿಡಿಸುತ್ತ "ಆ ಮಾವ ಈ ಊರಿಗೆ ಹೊಸತಾಗಿ ಬಂದರಂತೆ. ನಾನು ಅವರ ಮಗಳ ಹಾಗೇ ಇದ್ದೇನಂತೆ. ಸ್ವಲ್ಪ ಹೊತ್ತು ನನ್ನ ಹತ್ತಿರ ಮಾತಾಡಿ ಅಂಗಡಿಗೆ ಕರಕೊಂಡು ಹೋಗಿ ಈ ಮಿಠಾಯಿ ತೆಗೆಸಿಕೊಟ್ಟರು. ಅವರಿಗೆ ಈ ಊರಲ್ಲಿ, ಅಗೋ, ಅಲ್ಲಿ ಕಾಣುವ ಕಚೇರಿಯಲ್ಲಿ ಕೆಲಸವಂತೆ" ಎಂದಳು.

ಕೋದಂಡನ ಹೆಂಡತಿ ಮಗಳ ಕೊರಳಲ್ಲಿದ್ದ ಚಿನ್ನದ ಸರವನ್ನು ತೆಗೆದು ಗಂಗಾಧರನಿಗೆ ಕೊಡುತ್ತ, "ನನ್ನ ಮೂರ್ಖತೆಯಿಂದ ಇವರು ಇಂಥಾ ಕಳ್ಳರಾಗುತ್ತಾರೆಂದು ನಾನು ತಿಳಿಯದಿದ್ದುದು ನನ್ನ ಶತ ಮೂರ್ಖತನವೇ. ಮಕ್ಕಳಿಗಂತೂ ಚಿನ್ನ ಹಾಕಲೇ ಬಾರದು, ಆ ಗಡ್ಡದವರು ಒಳ್ಳೆಯವರಾದ್ದರಿಂದ ಸರಿ ಹೋಯ್ತು, ನಿಮ್ಮಿಂದ ನನಗೂ ಬುದ್ಧಿಬಂತು. ಕ್ಷಮಿಸಿರಿ" ಎಂದಳು.

ಗಂಗಾಧರನು ಚಿನ್ನದ ಸರವನ್ನು ಜೇಬಿಗೆ ಹಾಕಿಕೊಂಡು, ಕೋದಂಡನ ಮಗಳನ್ನು ಆಪ್ಯಾಯತೆಯಿಂದ ತಟ್ಟಿ "ದೇವರ ದಯದಿಂದ ಅನರ್ಥ ತಪ್ಪಿತು!" ಎಂದಳು.





# ಇಬ್ಬರು ಕವಿಗಳು

"ಮತ್ತೆ ಬಂದೇ ಬಂದನಲ್ಲಾ" ಎಂದು ಬೇತಾಳವು ಬೆಚ್ಚಿಬೀಳುವಂತೆ ಆದರ ಬೆಂಬಿಡದ ರಾಜಾ ತ್ರಿವಿಕ್ರಮನು, ಮರದ ಮೇಲೇರಿ ಕೊಂಬೆಯಲ್ಲಿ ನೇತಾಡುತ್ತಿದ್ದ ಬೇತಾಳಾವೇಶಿತ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಶವದ ಬಾಯಿಯನ್ನು ಕದಲಿಸಿ ಮಾತಾಡ ತೊಡಗಿತು. "ರಾಜಾ, ನಿನ್ನ ಈ ಹಟವೂ, ಕೈ ಹಿಡಿದ ಕಾರ್ಯವನ್ನು ಸಾಧಿಸಿ ತೀರಬೇಕೆಂಬ ದೃಢ ಸಂಕಲ್ಪವೂ ಮೆಚ್ಚ ತಕ್ಕುದೆನ್ನಲು ಸಂದೇಹವೇನಿಲ್ಲ. ನೀನು ಯಾವ ಮಹಾಕಾಯನ ಸಾಧನೆಗೆ ಹೆಣಗುವಿಯೋ ನಾನರಿಯೆನಾದರೂ ಅನೇಕಮಂದಿ ರಾಜರಿಗೆ ರಾಜ್ಯಪಾಲನೆಯಲ್ಲಿರುವಷ್ಟು ಆಸಕ್ತಿ ಕವಿತ್ವ ಮೊದಲಾದ ಲಲಿತ ಕಲೆಗಳ ಮೇಲೆ ಇರುವುದಿಲ್ಲ. ಆದರೂ ತಾವು ದೊಡ್ಡ ಪಂಡಿತ ಪೋಷಕರೆಂಬ ಕೀರ್ತಿ ಸಂಪಾದಿಸಲಿಕ್ಕಾಗಿ ಏನೇನೋ ಹಟ ಹಿಡಿಯುತ್ತಾರೆ. ಕವಿಯೆಂದು ಜಂಬ ತೋರಿಸುವವನಿಗೂ ಆಸ್ಥಾನದಲ್ಲಿ ಸ್ಥಾನಕೊಡುತ್ತಾರೆ. ತಾನು ಬಹು ಸೂಕ್ಷ್ಮವಾಗಿ

## ಬೇತಾಳ ಕಥೆಗಳು?..



ಪರೀಕ್ಷೆ ಮಾಡುವವನೆಂದು ತೋರಿಸಲು ಹೇಗೆ ಹೇಗೋ ಪ್ರವರ್ತಿಸುತ್ತಾರೆ. ಇದಕ್ಕೆ ಉದಾಹರಣೆ ಯಾಗಿ ನಿನಗೆ ಜಯವರ್ಮನೆಂಬ ರಾಜನ ಕಥೆಯನ್ನು ಹೇಳುತ್ತೇನೆ. ನಡೆಯುವ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು:

ಮಾಳವ ದೇಶವನ್ನು ಪರಿಪಾಲಿಸುವ ಜಯವರ್ಮ ಮಹಾರಾಜನ ಸಭಾಸ್ಥಾನದಲ್ಲಿ ದಿನಾ ಏನೋ ಒಂದು ಸಾಂಸ್ಕೃತಿಕ ಕಾರ್ಯಕ್ರಮವು ನಡೆಯುತ್ತಿತ್ತು. ಒಂದು ಸಾರಿ ಹರಿದಾಸನೊಬ್ಬನು ತನ್ನ ಕಥನ ಚಾತುರ್ಯದಿಂದ ಸಭಿಕರನ್ನೆಲ್ಲಾ ಮಂತ್ರಮುಗ್ಧ ರಾಗುವಂತೆ ಮಾಡಿಬಿಟ್ಟನು.

ಜಯವರ್ಮ ರಾಜನೂ ಹರಿದಾಸನನ್ನು ಬಹಳ ವಾಗಿ ಮೆಚ್ಚಿ, ಉಡುಗೊರೆಗಳನ್ನಿತ್ತು ಸನ್ಮಾನ ಮಾಡಿ, "ನೀವು ನನ್ನ ಆಸ್ಥಾನದಲ್ಲೇ ಇದ್ದುಬಿಡ ಬಾರದೆ ? ನಿಮ್ಮಂತಹ ದೊಡ್ಡ ಕಥಕ ವಿದ್ವಾಂಸ ರನ್ನು ನಾನಿದುವರೆಗೂ ನೋಡಲಿಲ್ಲ. ನಿಮಗೆ ತಕ್ಕ ಗೌರವವನ್ನು ಸಲ್ಲಿಸುತ್ತಾ ಇರುತ್ತೇನೆ" ಎಂದನು.

ಅದಕ್ಕೆ ಹರಿದಾಸನು ವಿನಯದಿಂದ, "ಪ್ರಭೂ, ಇದರಲ್ಲಿ ನನ್ನ ದೊಡ್ಡತನವೇನೂ ಇಲ್ಲ. ನಮ್ಮ ದೇಶದಲ್ಲಿ ನಾಗೇಶ್ವರ ಮತ್ತು ಗಂಗಾಧರರೆಂಬ ಇಬ್ಬರು ಮಹಾಕವಿಗಳಿದ್ದಾರೆ. ಅವರು ರಾಜಾಶ್ರಯ ಕ್ಕಾಗಿ ಯಾವುದನ್ನೂ ಬರೆಯುವರಲ್ಲ. ತಮ್ಮ ತೃಪ್ತಿಗಾಗಿಯೇ ಕವಿತಾರಚನೆ ಮಾಡುವವರು. ನನ್ನ ಪುಣ್ಯದಿಂದ ಅವರಿಬ್ಬರ ಕಾವ್ಯಗಳನ್ನು ಓದುವ ಭಾಗ್ಯ ನನಗೆ ದೊರಕಿತು. ಅವುಗಳೊಳಗಿನ ಕೆಲವು ಪದ್ಯಗಳನ್ನು ಸಂಗ್ರಹಿಸಿ ನಾನು ಈ ಹರಿಕಥೆಯನ್ನು ಪೋಣಿಸಿದೆನು. ಆದುದರಿಂದ ದೊಡ್ಡತನವೆಲ್ಲ ಅವರದೇ ಹೊರತು, ನನ್ನದೇನಿಲ್ಲ" ಎಂದನು.

ರಾಜಾಜಯವರ್ಮನು ಕೂಡಲೇ ಆ ಇಬ್ಬರು ಮಹಾಕವಿಗಳನ್ನು ತನ್ನ ಆಸ್ಥಾನಕ್ಕೆ ಬರಮಾಡಿಸ ಬೇಕೆಂದು ಆಶಿಸಿದನು. ಅವರನ್ನು ಕರೆಯಿಸಿಕೊಳ್ಳಲು ಎರಡು ಮೇನೆಗಳನ್ನೂ, ಇತರ ಪರಿವಾರದವರನ್ನೂ ಕಳುಹಿಸಿಕೊಟ್ಟನು. ಕೆಲವು ದಿನಗಳಲ್ಲಿ ಆ ಇಬ್ಬರು ಮಹಾಕವಿಗಳು ಜಯವರ್ಮನ ಆಹ್ವಾನವನ್ನು ಮನ್ನಿಸಿ ಹೊರಟು ಬಂದರು. ಜಯವರ್ಮನು ಅವರಿಬ್ಬರಿಗೂ ಬೇರೆ ಬೇರೆ ಬಿಡದಿಗಳನ್ನು ಏರ್ಪಾಡು ಮಾಡಿಸಿಕೊಟ್ಟು, ಸಕಲ ಸೌಕರ್ಯಗಳನ್ನೂ ಕಲ್ಪಿಸಿ ಕೊಟ್ಟನು. ತಾನೇ ಸ್ವತಃ ಅವರನ್ನು ದರ್ಶನಮಾಡಿ ಅವರ ಕವಿತೆಗಳನ್ನು ಕೇಳಿದನು. ನಿಜವಾಗಿಯೂ ಅದರ ಕವಿತ್ವ ಶಕ್ತಿ ದೊಡ್ಡದೇ ಆಗಿದ್ದುವು. ಪ್ರತಿ ಪದ್ಯದಲ್ಲಿಯೂ ಅಪೂರ್ವವಾದ ಭಾವಗಳು ಲಾಸ್ಯ ವಾಡುತ್ತಿದ್ದುವು. ಶಬ್ದಗಳ ಜೋಡಣೆಯಲ್ಲಿ ಸಂಗೀತ ಧ್ವನಿಗಳಿದ್ದುವು. ಪಂಡಿತ ಸಭೆಯಲ್ಲಿಯೂ ಅವರ ಕಾವ್ಯಗಳನ್ನು ಓದಿಸಿದ್ದಾಯಿತು.

ಆದರೆ ರಾಜನಿಗೆ ಒಂದು ಅನುಮಾನವು ಬಂದಿತು. ನಾಗೇಶ್ವರನೂ, ಗಂಗಾಧರನೂ ದೊಡ್ಡ ಕವಿತೆಗಳನ್ನು



ಹೇಳಿದರು ನಿಜ. ಎಲ್ಲರೂ ತಲೆ ದೂಗಿದುದೂ ಸರಿಯೆ. ಆದರೆ ಇಬ್ಬರಲ್ಲಿ ಯಾರ ಕವಿತ್ವ ಹೆಚ್ಚಿನದು?

ರಾಜನು ತನ್ನ ಸಂದೇಹವನ್ನು ಕುರಿತು ಆಸ್ಥಾನದ ಕವಿಗಳಿಗೂ ಪಂಡಿತರಿಗೂ ಹೇಳಿ, ಅವರ ಕಾವ್ಯಗಳನ್ನು ಪೂರ್ತಿ ಓದಿ ತನ್ನ ಸಂದೇಹವನ್ನು ಪೂರ್ತಿಗೊಳಿಸಬೇಕೆಂದು ಅವರೊಂದಿಗೆ ಹೇಳಿದನು.

ಮರುದಿನ ಅವರೆಲ್ಲರೂ ಏಕ ಕಂಠದಿಂದ, "ಈ ಕಾವ್ಯಗಳ ಪಠನವು ನಮಗೆ ಅದೊಂದು ವಿಧವಾದ ಪರವಶತ್ವವನ್ನು ಉಂಟುಮಾಡುತ್ತವೆ. ಇವುಗಳೆರಡೂ ಅದ್ಭುತವಾದ ಕಾವ್ಯಗಳು. ಇವುಗಳನ್ನು ಓದಿ ಆನಂದಿಸಬೇಕೇ ಹೊರತು, ಯಾವುದು ಹೆಚ್ಚಿನದೆಂದು ಹೇಳುವ ಶಕ್ತಿ ನಮಗಿಲ್ಲವೆಂದು ಬಿನ್ನವಿಸಿಕೊಳ್ಳುತ್ತೇವೆ. ಕ್ಷಮಿಸಬೇಕು" ಎಂದರು ನಮ್ರತೆಯಿಂದ.

ಆ ಬಗೆಯ ಪಂಡಿತರ ಉತ್ತರವನ್ನು ಕೇಳಿ ರಾಜನ ಹಟವು ಹೆಚ್ಚಾಯಿತು. ಅವನು ಮಂತ್ರಿಯನ್ನು ಕರೆಯಿಸಿ, "ನನ್ನ ಆಸೆ ನೆರವೇರುವ ಮಾರ್ಗವಿಲ್ಲವೇನು? ನಾಗೇಶ್ವರನೂ, ಗಂಗಾಧರನೂ, ಬರೆದ ಕಾವ್ಯಗಳನ್ನು ಅರ್ಥಮಾಡಿಕೊಂಡು, ಅವುಗಳ ದೊಡ್ಡ ತನವನ್ನು ಅಳೆದು ಹೇಳುವವರು ನಮ್ಮ ದೇಶದಲ್ಲಿ ಯಾರೂ ಇಲ್ಲವೇನು?" ಎಂದು ಕೇಳಿದನು.

ಮಂತ್ರಿ ಸ್ವಲ್ಪ ಆಲೋಚನೆ ಮಾಡಿ, "ಪ್ರಭೂ, ಈ ಕವಿಗಳು ಸಾಮಾನ್ಯರಲ್ಲ. ಇಂತಹವರು ಯಾವ ದೇಶದಲ್ಲಾದರೂ ಅಪೂರ್ವವಾಗಿರುತ್ತಾರೆ. ಆದುದರಿಂದ ಅವರ ಶಕ್ತಿಯನ್ನು ಸರಿಯಾಗಿ ಅಳೆದು ಹೇಳಲು ಅವರೇ ಸಮರ್ಥರು" ಎಂದನು.

ಜಯವರ್ಮನಿಗೆ ಈ ಸೂಚನೆ ಸರಿಯೆನಿಸಿತು. ಅವನು ಗಂಗಾಧರನು ಬರೆದ ಒಂದು ಕಾವ್ಯವನ್ನು ತೆಗೆದುಕೊಂಡು ನಾಗೇಶ್ವರನ ಬಳಿಗೆ ಹೋದನು.

ಅವನೊಂದಿಗೆ ತನ್ನನ್ನು ಪೀಡಿಸುವ ಪ್ರಶ್ನೆಯನ್ನು ಕುರಿತು ವಿವರಿಸಿ, "ತಾವು ಈ ಕಾವ್ಯವನ್ನು ಪರಿಶೀಲಿಸಿ ನಿಷ್ಪಕ್ಷಪಾತವಾಗಿ ತಮ್ಮ ಅಭಿಪ್ರಾಯ ತಿಳಿಸಬೇಕು. ಇಂತಹ ವಿಷಯದಲ್ಲಿ ತೀರ್ಪು ಹೇಳುವ ಶಕ್ತಿ ದೇಶದಲ್ಲಿ ನಿಮ್ಮೊಬ್ಬರಿಗೆ ಮಾತ್ರವೇ ಇದೆ" ಎಂದನು.

ನಾಗೇಶ್ವರನು ಆ ಕಾವ್ಯವನ್ನು ಚೆನ್ನಾಗಿ ಪರಿಶೀಲನೆ ಮಾಡಿ, "ಪ್ರಭೂ, ನಿಸ್ಸಂದೇಹವಾಗಿ ಇದು ಬಹಳ ದೊಡ್ಡ ಗುಣವುಳ್ಳ ಕಾವ್ಯವಾಗಿದೆ. ಗಂಗಾಧರನು ನನಗಿಂತಲೂ ದೊಡ್ಡಕವಿಯಾಗಿದ್ದಾನೆ" ಎಂದನು.

ಈ ತೀರ್ಪನ್ನು ಕೇಳಿ ಜಯವರ್ಮರಾಜನಿಗೆ ಆಶ್ಚರ್ಯವಾಯಿತು. ತರುವಾಯ ಅವನು ನಾಗೇಶ್ವರನ ಒಂದು ಕಾವ್ಯವನ್ನು ತೆಗೆದುಕೊಂಡು ಗಂಗಾಧರನ ಬಳಿಗೆ ಹೋಗಿ, ನಡೆದ ಸಂಗತಿಯನ್ನು ಅವನೊಂದಿಗೆ ಹೇಳಿ, "ನೀವೇ ಹೆಚ್ಚಿನವರೆಂದು ನಾಗೇಶ್ವರರೇ ಹೇಳಿದ ಮೇಲೆ ನೀವೇ ಏಕೈಕ ಮಹಾ ಕವಿಯೆಂದು ನನಗೂ ತೋರುತ್ತದೆ. ಆದರೂ ಈ ಕಾವ್ಯವನ್ನು ನೀವೊಮ್ಮೆ ನೋಡಿ

ನಾಗೇಶ್ವರರನ್ನು ಕುರಿತು ನಿಮ್ಮ ಅಭಿಪ್ರಾಯ ತಿಳಿಸಬೇಕು" ಎಂದನು.

ಗಂಗಾಧರನು ಆ ಕಾವ್ಯವನ್ನು ಪರಿಶೀಲಿಸಿ ನೋಡಿ, "ಮಹಾಪ್ರಭೂ! ಇದು ಬಹಳ ದೊಡ್ಡ ಭಾವಾರ್ಥಗಳಿಂದ ತುಂಬಿದ ಮಹಾ ಕಾವ್ಯ. ಇದನ್ನು ರಚಿಸಿದ ನಾಗೇಶ್ವರರು ನನಗಿಂತಲೂ ದೊಡ್ಡ ಕವಿಗಳು" ಎಂದನು.

ಇದನ್ನು ಕೇಳಿ ರಾಜನಿಗೆ ಮತ್ತೆ ಸಮಸ್ಯೆ ಗಿಟ್ಟಿತು. ಅವನು ಮಂತ್ರಿಯೊಂದಿಗೆ ನಡೆದ ಸಮಾಚಾರವನ್ನೆಲ್ಲ ಹೇಳಿ, "ಇವರಿಬ್ಬರ ದೊಡ್ಡತನವನ್ನು ನಿರ್ಣಯಿಸಲು ನಮಗೆ ಸಾಧ್ಯವಿಲ್ಲವೆಂದೇ ತೋರುತ್ತದೆ" ಎಂದನು.

ಮಂತ್ರಿ ಸ್ವಲ್ಪಹೊತ್ತು ಆಲೋಚನೆ ಮಾಡಿ, "ಮಹಾರಾಜಾ, ಈ ಕವಿಗಳು ಕಾವ್ಯರಚನೆಯಲ್ಲಿ ಮಾತ್ರವಲ್ಲದೆ, ವಿನಯ ಗುಣದಲ್ಲಿ ಕೂಡಾ ಒಬ್ಬರನ್ನೊಬ್ಬರು ಮೀರಿಸುವ ಹಾಗಿದ್ದಾರೆ. ಇವರಿಂದ ನಿಜವನ್ನು ಹೊರಡಿಸಲಿಕ್ಕೆ ಒಂದು ಸಣ್ಣ ಉಪಾಯ ಮಾಡಬೇಕು. ಕಾವ್ಯಕರ್ತನ ಹೆಸರು ಹೇಳಿದುದರಿಂದ ಅವರು ಕಾವ್ಯದ ಮೇಲೆ ತಮ್ಮ ನಿಜಾಭಿಪ್ರಾಯವನ್ನು ಹೇಳುವುದಿಲ್ಲ. ತನ್ನ ದೊಡ್ಡ ತನವನ್ನು ತಾನೇ ಹೇಳಿಕೊಳ್ಳುವುದು ಉತ್ತಮರ ಲಕ್ಷಣವಲ್ಲವಷ್ಟೆ?" ಎಂದನು.

ಮಂತ್ರಿಯ ಸೂಚನೆ ರಾಜನಿಗೆ ಅರ್ಥವಾಯಿತು. ರಾಜನು ನಾಗೇಶ್ವರನು ರಚಿಸಿದ ಬೇರೊಂದು ಕಾವ್ಯವನ್ನು ಎತ್ತಿಕೊಂಡು, ಪ್ರತಿನಕಲು ತೆಗೆಯಿಸಿ ಗಂಗಾಧರನ ಬಳಿಗೆ ಹೋಗಿ, "ಕವಿವರ್ಮರೇ, ನಮ್ಮ ಆಸ್ಥಾನದಲ್ಲಿ ಸುಪದ್ಮನೆಂಬ ಭಟನೊಬ್ಬ ನಿದ್ದಾನೆ, ಆಸ್ಥಾನದಲ್ಲಿ ದಿನಾ ಕವಿತ್ವಗಳನ್ನು ಕೇಳಿ ಕೇಳಿ, ಅವನಿಗೂ ಸಾಹಿತ್ಯದಲ್ಲಿ ಅಭಿರುಚಿ ಯುಂಟಾಗಿ ತಾನೂ ಒಂದು ಕಾವ್ಯ ಬರೆದಿದ್ದಾನೆ. ಈ ಸಂಗತಿ ನನಗೆ ಮೊನ್ನೆಯಷ್ಟೇ ಗೊತ್ತಾಯಿತು. ಇದು ಅವನ ಮೊದಲನೇ ರಚನೆಯಂತೆ. ನನಗೇನೋ ಅಷ್ಟೇನೂ ಹಿಡಿಸಲಿಲ್ಲ. ಆದರೂ ಸಾಹಿತ್ಯದೊಳಗಿನ ತಪ್ಪೊಪ್ಪು ಎಣಿಸಲು ನಾನು ಎಷ್ಟರವನು? ನನಗೆ ಅರ್ಥವಾಗದ



ಭಾವ ವಿಶೇಷಗಳೂ ಇರಬಹುದು. ಈ ಕಾವ್ಯದ ಮೇಲೆ ತಮ್ಮ ಅಭಿಪ್ರಾಯ ಕೇಳಬೇಕೆಂದಿದೆ" ಎಂದನು.

ಗಂಗಾಧರನು ಆ ಕಾವ್ಯವನ್ನು ಪರಿಶೀಲಿಸಿ ಆದ ಮೇಲೆ, "ಈ ರಚನೆ ಪ್ರಾಥಮಿಕ ಸ್ಥಾಯಿಯಲ್ಲೇ ಇದೆ. ಇವನು ದೊಡ್ಡ ಕವಿಯಾಗಬೇಕಾದರೆ ಇನ್ನೂ ತುಂಬಾ ಶ್ರಮಪಟ್ಟು ಅನೇಕ ಕಾವ್ಯಗಳನ್ನು ಓದಿ ಪಳಗಬೇಕೆಂಬುದು ನನ್ನ ಅಭಿಪ್ರಾಯ" ಎಂದನು.

ಆಮೇಲೆ ರಾಜನು ಗಂಗಾಧರನ ಒಂದು ಕಾವ್ಯವನ್ನು ನಕಲು ತೆಗೆಯಿಸಿ, ನಾಗೇಶ್ವರನ ಬಳಿಗೆ ಹೋಗಿ, ಈ ಕಾವ್ಯ ಸುಪದ್ಮನೆಂಬ ಆಸ್ಥಾನದ ಭಟನು ಬರೆದನೆಂದೂ, ಅಭಿಪ್ರಾಯ ತಿಳಿಸಬೇಕೆಂದೂ ಹೇಳಿದನು.

ನಾಗೇಶ್ವರನು ಅದನ್ನು ಪರಿಶೀಲಿಸಿ, "ಮಹಾಪ್ರಭೂ! ಇದು ದೊಡ್ಡ ಕವಿ ಬರೆದ ಹಾಗೆಯೇ ಇದೆ. ಶಬ್ದ ಪ್ರಯೋಗಗಳಲ್ಲಿ ಸಂಗೀತವು ಧ್ವನಿಸುತ್ತಿವೆ. ಪದ್ಯಗಳಲ್ಲೆಲ್ಲಾ ಅದ್ಭುತವಾದ ಭಾವಜಾಲಗಳಿವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ನಿಮ್ಮ ಸುಪದ್ಮ ಭಟನ ಬಾಯಿಯಲ್ಲಿ ಸರಸ್ವತಿಯೇ ಮಾತಾಡುತಿದ್ದಾಳೆ!" ಎಂದನು.

ಈ ಮಾತುಗಳನ್ನು ಕೇಳಿ ರಾಜನು ಸಂತೋಷಪಟ್ಟು, ಮಂತ್ರಿಯನ್ನು ಕರೆಯಿಸಿ, "ನಾವೀಗ ಗಂಗಾಧರರನ್ನು ಘನ ರೀತಿಯಲ್ಲಿ ಸನ್ಮಾನಿಸಬೇಕಾಗಿದೆ. ಇಬ್ಬರೊಳಗೆ ಆತನೇ ಉತ್ತಮ ಕವಿಯೆಂದು ಸ್ಪಷ್ಟವಾಯಿತು" ಎಂದು ನಡೆದ ಸಮಾಚಾರವನ್ನೆಲ್ಲಾ ಹೇಳಿದನು.

ಕೂಡಲೇ ಮಂತ್ರಿ: "ಮಹಾರಾಜರೇ, ತಾವು ಸನ್ಮಾನಿಸಬೇಕಾದುದು ನಾಗೇಶ್ವರನನ್ನೇ ಹೊರತು, ಗಂಗಾಧರನನ್ನು ಅಲ್ಲ!" ಎಂದನು.

ಮಂತ್ರಿ ಹೇಳಿದುದನ್ನು ಕೇಳಿ, ಜಯವರ್ಮ ರಾಜನು ಆಶ್ಚರ್ಯ ಪಡುತ್ತ, ದೀರ್ಘಾಲೋಚನೆಯಲ್ಲಿ ಮುಳುಗಿದನು.

ಬೇತಾಳವು ಕಥೆ ಹೇಳುವುದನ್ನು ಅಲ್ಲಿಗೆ ನಿಲ್ಲಿಸಿ, "ಮಹಾರಾಜಾ, ಇಲ್ಲಿ ನನಗೊಂದು ಸಂದೇಹ ಉಂಟಾಗಿದೆ. ಗಂಗಾಧರನನ್ನು ಸನ್ಮಾನಿಸಬೇಕೆಂದು



ರಾಜನು ಹೇಳಿದುದನ್ನು ಮಂತ್ರಿ ಖಂಡಿಸಿ ನಾಗೇಶ್ವರನನ್ನು ಸನ್ಮಾನಿಸಬೇಕೆಂದು ಹೇಳಿದ ಕೂಡಲೇ, ರಾಜನು ಕೋಪಿಸುವುದಕ್ಕೆ ಬದಲಾಗಿ ದೀರ್ಘಾಲೋಚನೆಯಲ್ಲಿ ಬೀಳಲಿಕ್ಕೆ ಏನಿದೆ ? ಕಾವ್ಯವನ್ನು ಬರೆದವರ ಹೆಸರುಗೊತ್ತಿಲ್ಲದಿರುವಾಗ ನಾಗೇಶ್ವರನ ಕಾವ್ಯವು ಚೆನ್ನಾಗಿಲ್ಲವೆಂದು ಗಂಗಾಧರನು ಹೇಳಿದ್ದಾನೆ. ಕಾವ್ಯಕರ್ತನು ಯಾರೆಂದು ತಿಳಿಯದಿದ್ದರೂ ನಾಗೇಶ್ವರನು ಗಂಗಾಧರನ ಕಾವ್ಯವನ್ನು ಪರಿಶೀಲಿಸಿ ಅತ್ಯುತ್ತಮವೆಂದಿದ್ದಾನೆ. ಇದೊಂದೇ ಸಾಕಷ್ಟೇ ಗಂಗಾಧರನೇ ಹೆಚ್ಚಿನವನೆನ್ನಲು ? ಬೇರೇನಿದೆ ಆಲೋಚನೆ ಮಾಡಲಿಕ್ಕೆ ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಪುಡಿಪುಡಿಯಾಗಿ ಬೀಳದಿರದು " ಎಂದಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು : "ನಾಗೇಶ್ವರನೂ ಗಂಗಾಧರನೂ ಒಬ್ಬರನ್ನೊಬ್ಬರು ಮೀರಿಸುವಂತಹ ಮಹಾಕವಿಗಳೆನ್ನಲು ಏನೂ ಸಂದೇಹವಿಲ್ಲ. ಅವರಲ್ಲಿ ಯಾರೋ ಒಬ್ಬರನ್ನು ಮಾತ್ರ ಸನ್ಮಾನಿಸಬೇಕೆಂದು ಬರುವಾಗ ಕಾವ್ಯದೃಷ್ಟಿಯಲ್ಲಿ ಮಾತ್ರ ನೋಡಿದರಾಗದು. ಅವರಿಬ್ಬರ ಗುಣಗಳನ್ನೂ ಪರಿಶೀಲಿಸಬೇಕಾಗಿ ಬರುತ್ತದೆ. ಉತ್ತಮ ಕವಿ ಎನಿಸಬೇಕಾದರೆ ಕಾವ್ಯ ಮಾತ್ರದ ಪರೀಕ್ಷೆಯಿಂದ ಸಾಧ್ಯವಾಗದೆ ಹೋದಾಗ ಅವರ ವೈಯಕ್ತಿಕ ಗುಣವನ್ನು ನೋಡಬೇಕಾಗಿ ಬಂತು. ಹಾಗೆ ನೋಡಿದಾಗ ಗಂಗಾಧರನು ಅಹಂಕಾರಿ ಎಂದು ಗೊತ್ತಾಗುತ್ತದೆ. ಮೊದಲು ರಾಜನು ನಾಗೇಶ್ವರನ ಬಳಿಗೆ ಹೋದನು. ಅವನು ಗಂಗಾಧರನೇ ದೊಡ್ಡ ಕವಿ ಎಂದನು. ಆಮೇಲೆ ಗಂಗಾಧರನು ಹೇಳಿದ ಹಾಗೆ ನಾಗೇಶ್ವರನ ಕವಿತೆ ಪ್ರಾಥಮಿಕ ಸ್ಥಾಯಿಯಲ್ಲೇ ಇರುವುದಾದರೆ, ಯಾವ ಕವಿ ಪಂಡಿತನೂ ಅಂಗೀಕರಿಸಲಾರನು. ಆ ಕಾವ್ಯದಲ್ಲಿರುವ ದೊಡ್ಡ ಗುಣಗಳನ್ನು ಗಂಗಾಧರನು ಗ್ರಹಿಸಲಾರದೆ ಹೋದನು. ಅದನ್ನು ಸುಪದ್ಮನೆಂಬ ಭಟನು ರಚಿಸಿದನೆಂದು ರಾಜನು ಹೇಳಿದುದರಿಂದ ಅವನು ಅದನ್ನು ಮನಸ್ಸಿಟ್ಟು ಪರಿಶೀಲಿಸಲೂ ಇಲ್ಲ. ಹೊಸದಾಗಿ ಲೇಖನಿ ಹಿಡಿದ ಕವಿಯನ್ನು ಮಹಾ ಕವಿಯಾದವನು ತಪ್ಪದೆ ಪ್ರೋತ್ಸಾಹಿಸುತ್ತಾನೆ, ಅಂತಹ ಉದಾರಗುಣ ಸಂಸ್ಕಾರವು ಗಂಗಾಧರನಲ್ಲಿ ಇಲ್ಲ. ಮಂತ್ರಿ ಹೇಳಿದಂತೆ ಕಾವ್ಯವೂ, ಆ ಕಾವ್ಯ ಬರೆದವನೂ ಉತ್ತಮನೆನಿಸಿ ಸನ್ಮಾನಕ್ಕೆ ಪಾತ್ರನಾಗುವವನು ನಾಗೇಶ್ವರನೇ ಹೊರತು ಗಂಗಾಧರನಲ್ಲವೆಂಬುದೇ ನಿಜ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಹಾರಿ ಹೋಗಿ, ಮರದ ಕೊಂಬೆ ಹಿಡಿದು ನೇತಾಡಿತು.



# ಚೌಕಾಶಿ ವ್ಯಾಪಾರ

**ಚ**ಕ್ರಧರ ಎಂಬ ಪಟ್ಟಣದಲ್ಲಿ ಚಂದ್ರಯ್ಯನೆಂಬ ಅಂಗಡಿಗಾರನಿದ್ದನು. ಅವನು ಎಲ್ಲಾ ಬಗೆಯ ಹಳೆಯ ಸಾಮಾನುಗಳನ್ನೂ ಕೊಂಡು ಕೊಂಡು ಮಾರಾಟ ಮಾಡಿ ಬದುಕಿಕೊಂಡಿದ್ದನು.

ಒಂದು ದಿನ ಅವನು ವ್ಯಾಪಾರಕ್ಕೆ ಬಂದ ಜನರ ಗುಂಪಿನ ನಡುವೆ, ಕೊಂಡುಕೊಳ್ಳುವ ವಿಷಯದಲ್ಲಿ ವಾದವಿವಾದ ಮಾಡಿಕೊಂಡಿದ್ದನು. ಆಗ ರಾಮಣ್ಣ ನೆಂಬವನು ಕಂಬಳಿಯ ಸುರುಳಿಯೊಂದನ್ನು ತಂದು ಗುಂಪಿನಲ್ಲಿ ಮೆಲ್ಲಮೆಲ್ಲನೆ ಮುಂದೆ ನುಗ್ಗಿ ಚಂದ್ರಯ್ಯನ ಬಳಿಗೆ ಹೋಗಿ, "ಹೊಸ ಉಣ್ಣೆ ಕಂಬಳಿ ಕೊಂಡು ಕೊಳ್ಳಬೇಕಾದರೆ ಎಷ್ಟು ಬೆಲೆಯಾಗುತ್ತದೆ, ಹೇಳ ಬಲ್ಲಿರಾ ?" ಎಂದು ಕೇಳಿದನು.

ಅದನ್ನು ಕೇಳಿ ಚಂದ್ರಯ್ಯನು ಹುಬ್ಬು ಗಂಟು ಹಾಕಿಕೊಂಡು ರಾಮಣ್ಣನನ್ನು ನೋಡಿ, "ಇದು ಹಳೇ ವಸ್ತುಗಳ ವ್ಯಾಪಾರದಂಗಡಿ. ಹೊಸದರ ಸಮಾಚಾರ ಇಲ್ಲಿ ಕೇಳ ಬೇಡಿ, ಬೇರೆ ಕಡೆಗೆ ಹೋಗಿ ಕೇಳಿ" ಎಂದನು ಬೇಸರದಿಂದ.

"ಇದು ಹಳೇ ವಸ್ತುಗಳ ವ್ಯಾಪಾರದ ಅಂಗಡಿ ಎಂದು ನನಗೂ ಗೊತ್ತಿದೆ. ಆದರೆ ಅಂಥವುಗಳಿಗೆ ಬೆಲೆಕಟ್ಟುವಾಗ ಅವೇ ಹೊಸದಾಗಿದ್ದರೆ ಎಷ್ಟು ಬೆಲೆಯಿರುತ್ತದೆಂದು ಗೊತ್ತಾಗಬೇಡವೇನು ? ಅದು ನಿಮಗೆ ಗೊತ್ತಿಲ್ಲವೆಂದರೆ ಹೇಗೆ ? ಯಾರು ನಂಬು ತ್ತಾರೆ ?" ಎಂದನು ರಾಮಣ್ಣ.

ಅದನ್ನು ಕೇಳಿ ಚಂದ್ರಯ್ಯ ನಗುತ್ತ "ಪರವಾಗಿಲ್ಲ ನೀವು ! ನಾನು ಹೊಸ ವಸ್ತುವಿನ ನಾಲ್ಕರಲ್ಲೊಂದು ಪಾಲಿನ ಬೆಲೆಗೆ ಹಳೆಯದನ್ನು ಕೊಂಡುಕೊಳ್ಳುತ್ತೇನೆ. ಅದರ ಮೇಲೆ ರೂಪಾಯಿಯೋ ಅರ್ಧ ರೂಪಾಯಿಯೋ ಲಾಭವಿಟ್ಟು ಮಾರುತ್ತೇನೆ. ಮಾತಿಗೆ ಬೇಕಾದರೆ ನಿಮ್ಮ ಕೈಯಲ್ಲಿರುವ ಹಳೆಯ ಕಂಬಳಿಗೆ ಹೊಸತಾದರೆ ಇಪ್ಪತ್ತು ರೂಪಾಯಿ ಇರುತ್ತದೆ" ಎಂದನು.

ರಾಮಣ್ಣನು ಆಶ್ಚರ್ಯಪಡುತ್ತ, "ಅಂದರೆ ಈ ಕಂಬಳಿಗೆ ಐದಾರು ರೂಪಾಯಿಗಿಂತ ಹೆಚ್ಚಿಗೆ ಬೆಲೆಯಿಲ್ಲ ಅನ್ನುವಿರೆಂದಾಯಿತು !" ಎಂದನು.

ಚಂದ್ರಯ್ಯನು ಆ ಕಂಬಳಿಯನ್ನು ಪರೀಕ್ಷಿಸಿ ನೋಡುತ್ತ, "ಇದಕ್ಕೆ ಅಷ್ಟು ಬರುವುದೂ ಕಷ್ಟವೇ. ಬಣ್ಣ ಬಿಳಿಚಾಗಿ ಹೋಗಿದೆ. ನಾಲ್ಕು ರೂಪಾಯಿ ಗಿಂತ ಹೆಚ್ಚು ಬಾರದು" ಎಂದನು.

ಜಿ. ರಷ್ಮ

"ಕಡೇ ಮಾತು ಕೇಳುತ್ತಿದ್ದೇನೆ. ಇನ್ನೊಂದು ಮಾತು ಹೇಳಿಬಿಡಿ !" ಎಂದನು ರಾಮಣ್ಣ.

ಚಂದ್ರಯ್ಯ ಕಂಬಳಿಯನ್ನು ತನ್ನ ಕೈಯಲ್ಲಿ ತೆಗೆದು ಕೊಂಡು ಮಡಿಕೆಗಳನ್ನೆಲ್ಲ ಬಿಡಿಸಿ ಪರೀಕ್ಷಿಸುತ್ತ, "ಇದು ಬಹಳ ಹಳೆಯ ಕಂಬಳಿ. ನಲುಗಿ ದಾರಗಳೆಲ್ಲ ಹೊರಬಿದ್ದಿವೆ. ಇದು ಮೂರು ರೂಪಾಯಿಗಿಂತ ಹೆಚ್ಚು ಬೆಲೆ ತಾಳದು" ಎಂದನು.

ರಾಮಣ್ಣ ಕೂಡಲೇ ಜೇಬಿನಿಂದ ಮೂರು ರೂಪಾಯಿ ತೆಗೆದು ಚಂದ್ರಯ್ಯನ ಕೈಗೆ ಹಾಕುತ್ತ, "ಅಂತೂ ವ್ಯಾಪಾರ ಮೂರು ರೂಪಾಯಿಗೆ ಖಂಡಿತ ಮಾಡಿಬಿಟ್ಟಿರಿ. ಸರಿ. ಕಂಬಳಿ ತೆಗೆದುಕೊಂಡು ಹೋಗುತ್ತೇನೆ" ಎಂದನು.

ಚಂದ್ರಯ್ಯ ತನ್ನ ಕೈಯಲ್ಲಿರುವ ಮೂರು ರೂಪಾಯಿಯನ್ನು ಪಿಳಿಪಿಳಿಸಿ ನೋಡುತ್ತ, "ನೀವು ನನಗೆ ಹಣ ಕೊಟ್ಟು ಕಂಬಳಿ ತೆಗೆದುಕೊಂಡು ಹೋಗುವುದೆಂದರೇನು ?" ಎಂದನು.

"ನಿಮ್ಮ ಅಂಗಡಿಯ ಕಂಬಳಿ ತಾನೇ ? ಹೊರಗೆ ತೂಗಾಡಿ ಸಿಟ್ಟಿರುವುದನ್ನು ನೋಡಿ, ನನಗೆ ಹಿಡಿಸಿದ್ದರಿಂದ ಚೌಕಸಿ ಮಾಡಿ ತೆಗೆದುಕೊಳ್ಳೋಣ ವೆಂದು ಒಳಗೆ ತಂದೆನು" ಎಂದನು ರಾಮಣ್ಣ.

ಚಂದ್ರಣ್ಣ ರಾಮಣ್ಣನನ್ನು ಕೋಪದಿಂದ ನೋಡುತ್ತ. "ನನ್ನ ಅಂಗಡಿದೇನಾ! ಈ ಕಂಬಳೀ ಮೇಲೆ ಇದರ ಬೆಲೆ ಬರೆದಿಟ್ಟ ಚೀಟಿ ಇದ್ದಿತಲ್ಲ ? ಅದೇನಾಯಿತು?" ಎಂದು ಕೇಳಿದನು.

"ಆ ಚೀಟೀ ಕಿತ್ತು ಕೆಳಗೆ ಬಿತ್ತು, ನನ್ನ ಜೇಬಿನಲ್ಲಿ ಇಟ್ಟುಕೊಂಡಿದ್ದೇನೆ" ಎಂದು ರಾಮಣ್ಣ ಚೀಟಿಯನ್ನು ತೆಗೆದು ಚಂದ್ರಯ್ಯನಿಗೆ ಕೊಟ್ಟನು.

ಚಂದ್ರಯ್ಯನು ಚೀಟಿಯನ್ನು ನೋಡಿ, "ಈ ಕಂಬಳಿಯ ಬೆಲೆ ಹತ್ತು ರೂಪಾಯಿ ಎಂದು ಸ್ಪಷ್ಟ ವಾಗಿ ಬರೆದಿದೆ. ಇಷ್ಟವಿದ್ದರೆ ಆ ಬೆಲೆ ಕೊಟ್ಟು ತೆಗೆದುಕೊಂಡು ಹೋಗಿ" ಎಂದನು.

"ಇದರ ಬೆಲೆ ಮೂರು ರೂಪಾಯಿಗಿಂತ ಹೆಚ್ಚಿಲ್ಲ ವೆಂದು ನಿಮ್ಮ ಬಾಯಿಯಿಂದ ನೀವೇ ಹೇಳಿದ ಮೇಲೆ, ಇದಕ್ಕೆ ಹತ್ತು ರೂಪಾಯಿ ಕೊಟ್ಟು ಕೊಂಡು ಕೊಳ್ಳುವ ಹುಚ್ಚನಾರಾದರೂ ಇರುವನೆ ?" ಎಂದು ರಾಮಣ್ಣ ಅಂಗಡಿಗೆ ವ್ಯಾಪಾರಕ್ಕೆ ಬಂದವರನ್ನು ಅರ್ಥವತ್ತಾಗಿ ನೋಡಿದನು. ರಾಮಣ್ಣ ಹೇಳಿದುದು ನ್ಯಾಯವೆಂದೇ ಎಲ್ಲರೂ ಹೇಳಿದರು.

ವಸ್ತುವನ್ನು ಕೊಳ್ಳಲಿಕ್ಕೇ ಬಂದನೋ, ಕೊಡಲಿಕ್ಕೇ ಬಂದನೋ ಗೊತ್ತಾಗದ ಹಾಗೆ ಇಷ್ಟೊಂದು ಚಾಲಾಕುತನದಿಂದ ವ್ಯಾಪಾರ ಮಾಡಿದ ರಾಮಣ್ಣ ನನ್ನು ಮನಸ್ಸಿನಲ್ಲೇ ಮೆಚ್ಚಿಕೊಳ್ಳುತ್ತ, ಚಂದ್ರಯ್ಯನು ಅವನಿಗೆ ಮೂರು ರೂಪಾಯಿಗೆ ಕಂಬಳಿಯನ್ನು ಕೊಟ್ಟುಬಿಟ್ಟನು,





# ಯಾತ್ರೆಯ ಫಲ

ಒಂದು ಕಾಲದಲ್ಲಿ ಗೋಗಟ್ಟೆ ಎಂಬ ಗ್ರಾಮದಲ್ಲಿ ರಾಘವಯ್ಯ ಮತ್ತು ಭದ್ರಯ್ಯ ಎಂಬವರೇ ದೊಡ್ಡ ಭೂಸ್ಥಿತಿ ಉಳ್ಳವರಾಗಿದ್ದರು. ಉಳಿದವರೆಲ್ಲ ಅವರಿಗಿಂತ ಕಡಿಮೆಯವರೇ. ಆದರೆ ಅವರಿಬ್ಬರು ದೊಡ್ಡವರ ಮಧ್ಯದಲ್ಲಿ ಯಾವಾಗಲೋ ಪೂರ್ವಕಾಲದ ಹಗೆಯೊಂದು ಹೊಗೆಯಾಡಿಕೊಂಡೇ ಇತ್ತು. ಹಿಂದೆ ಎಂದೋ ಆಸ್ತಿ ಕೊಂಡುಕೊಳ್ಳುವಾಗ ಬಂದ ತಗಾದೆಯೊಂದು ಅದಕ್ಕೆ ಕಾರಣವೆಂದು ಜನರು ಹೇಳುತ್ತಿದ್ದರು. ಆದುದರಿಂದ ಊರೊಳಗೆ ಅವರಿಬ್ಬರಿಂದಾಗಿ ಎರಡು ಪಕ್ಷಗಳೇ ಉಂಟಾಗಿದ್ದುವು.

ರಾಘವಯ್ಯನ ಕೆಲ ಮಂದಿ ಅನುಚರರು, ಅವನು ಕೊಡುವ ಪ್ರೋದ್ಬಲಗಳಿಂದ ಭದ್ರಯ್ಯನ ಕಡೆಯವರ ಮೇಲೆ ಮಾತುಮಾತಿಗೂ ಜಗಳ ಕೆದರುತ್ತಿದ್ದರು. ಭದ್ರಯ್ಯ ಕೂಡಾ ರಾಘವಯ್ಯನಿಗಿಂತ ಹೆಚ್ಚಿನವನೆಂಬ ಹಾಗೆ ತನ್ನ ಆಳುಗಳನ್ನು ಅವರ ಮೇಲೆ ಹುರಿಗೊಳಿಸುತ್ತಿದ್ದನು. ಕೆಲವು ಬಾರಿ ಅದು ದೊಡ್ಡ ಜಗಳವಾಗಿ ಪರಿಣಮಿಸಿ ಪ್ರಾಣಹಾನಿಯ ವರೆಗೂ ಹೋಗುತ್ತಿತ್ತು.

ಹೀಗೆ ಗ್ರಾಮದಲ್ಲಿರುವ ಎರಡು ಪಕ್ಷಗಳವರ ಜಗಳವನ್ನು ನೋಡಿ, ಗ್ರಾಮದ ಹೊರಗಿನ ಕೆರೆಗಟ್ಟೆಯಲ್ಲಿ ಆಶ್ರಮ ಕಟ್ಟಿ ವಾಸಮಾಡಿಕೊಂಡಿರುವ ಸಾಧುವಿಗೆ ಬಹಳ ನೋವನ್ನುಂಟು ಮಾಡುತ್ತಿತ್ತು. ಅವನು ರಾಘವಯ್ಯನನ್ನೂ ಭದ್ರಯ್ಯನನ್ನೂ ಕರೆದು ಹೀಗೆ ಜಗಳ ಮಾಡಿಕೊಂಡಿರುವುದು ಒಳ್ಳೆಯದಲ್ಲವೆಂದು ಎರಡು ಮೂರು ಸಾರಿ ಹಿತಬೋಧೆ ಮಾಡಿ ನೋಡಿದನು. ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಆದರೆ ಸಾಧುವಿನ ಮೇಲೆ ಆ ಇಬ್ಬರು ದೊಡ್ಡವರಿಗೂ ಭಕ್ತಿಗೌರವಗಳಿದ್ದುವು.

ಒಂದು ಸಾರಿ ರಾಘವಯ್ಯನಿಗೆ ತೀರ್ಥಯಾತ್ರೆ ಮಾಡಿ ಬರಬೇಕೆಂದು ತೋರಿತು. ಅವನು ಸಾಧುವಿನ ಹತ್ತಿರ ಬಂದು ಆ ಸಂಗತಿಯನ್ನು ಹೇಳುತ್ತ, "ನಾನು ನಮ್ಮೂರಿನ ಕೆಲವರನ್ನು ಕೂಡಾ ರಾಮೇಶ್ವರದ ವರೆಗೆ ಕರೆದುಕೊಂಡು ಹೋಗಿ ಅವರಿಗೂ ಪುಣ್ಯದಲ್ಲಿ ಭಾಗ ಸಿಗುವಂತೆ ಮಾಡಬೇಕೆಂದಿದ್ದೇನೆ, ತಾವು ಕೂಡಾ ತಮ್ಮ ಶಿಷ್ಯರೊಂದಿಗೆ ಬರಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ." ಎಂದು ಒತ್ತಾಯಿಸುವ ಧೋರಣೆಯಲ್ಲಿ ಹೇಳಿದನು. "ನನಗೇಕೆ ಈ ತೀರ್ಥಯಾತ್ರೆ ? ಎಲ್ಲಾ ಬಿಟ್ಟವನು ನಾನು.

ಆರ್. ಪ್ರಸಾದ



ಗಂಟನ್ನು ತಂದು ರಾಘವಯ್ಯನ ಕೈಗೆ ಕೊಟ್ಟು, "ಇದನ್ನು ಕೂಡಾ ನಿನ್ನೊಂದಿಗೆ ಪುಣ್ಯಕ್ಷೇತ್ರಗಳಿಗೆ ತೆಗೆದುಕೊಂಡು ಹೋಗಿ, ನೀವು ಮುಳುಗುವ ಎಲ್ಲಾ ತೀರ್ಥಗಳಲ್ಲಿಯೂ, ಮುಳುಗಿಸಿ ಭದ್ರವಾಗಿ ಹಿಂದಿರುಗಿ ತಂದು ನನಗೆ ಕೊಡಬೇಕು ಇದನ್ನು ನಾನು ನಿಮ್ಮೊಂದಿಗಿರುವ ಹಾಗೇ ತಿಳಿದುಕೋ" ಎಂದನು.

ರಾಘವಯ್ಯ ಆ ಮೂಟೆಯನ್ನು ತೆಗೆದುಕೊಂಡು ಹೊರಟು ಹೋದನು. ಮುಂದೆ ಒಂದು ಗಂಟೆ ಕಳೆದ ಮೇಲೆ ಭದ್ರಯ್ಯನು ಸಾಧುವಿನ ದರ್ಶನಕ್ಕೆ ಬಂದು ಕೈ ಮುಗಿದನು.

"ಏನು ಭದ್ರಯ್ಯಾ, ದಕ್ಷಿಣ ದೇಶದ ಯಾತ್ರೆಗೆ ಹೊರಡುವಿಯಾ?" ಎಂದು ಕೇಳಿದನು.

"ದಕ್ಷಿಣದಲ್ಲಿ ಆ ರಾಮೇಶ್ವರದ ವರೆಗೆ ಹೋಗಿ ಬರುವುದರಿಂದ ದೊಡ್ಡ ವಿಶೇಷವೇನಿದೆ ಸ್ವಾಮಿ? ನಾನು ನಮ್ಮೂರವರನ್ನೆಲ್ಲಾ ಕರೆದುಕೊಂಡು ಉತ್ತರ ದೇಶಗಳಲ್ಲಿರುವ ಎಲ್ಲಾ ಪುಣ್ಯಕ್ಷೇತ್ರಗಳನ್ನೂ ದರ್ಶಿಸಿ ಹಿಮಾಲಯದ ವರೆಗೂ ಹೋಗಿ ಬರಬೇಕೆಂದಿದ್ದೇನೆ. ಈ ಯಾತ್ರೆಯಲ್ಲಿ ನಮ್ಮೊಂದಿಗೆ ತಾವೂ ಶಿಷ್ಯರೊಂದಿಗೆ ಬರಬೇಕೆಂದು ನನ್ನ ಪ್ರಾರ್ಥನೆ. ನಿಮಗಾರಿಗೂ ಯಾವ ಕೊರತೆಯೂ ಬಾರದ ಹಾಗೆ ನೋಡಿಕೊಳ್ಳುವುದು ನನ್ನ ಭಾರ." ಎಂದು ಭದ್ರಯ್ಯ ಕೈಮುಗಿದನು.

"ನೀನು ಹೇಳಿದ ಹಾಗೆಯೇ ರಾಘವಯ್ಯನೂ ಹೇಳಿದ. ನಾನು ಬರುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ಅವನಿಗೆ ಹೇಳಿದ ಹಾಗೆಯೇ ನಿನಗೂ ಹೇಳುತ್ತೇನೆ. ನೀನೂ ಸಂತೋಷವಾಗಿ ಹೋಗಿ ಬಾ. ನನ್ನನ್ನು ಒತ್ತಾಯ ಮಾಡಬೇಡಯ್ಯ" ಎಂದನು ಸಾಧು.

"ಸ್ವಾಮಿ, ತಮಗೇನೋ ಎಲ್ಲರೂ ಸಮಾನರಾಗಿಯೇ ಕಾಣುತ್ತಿರಬಹುದು. ಆದರೆ ನನ್ನ

ಪ್ರಾಪಂಚಿಕರಾದ ನೀವೆಲ್ಲಾ ಹೋಗಿ ಬನ್ನಿ. ಅದರಿಂದ ಒಳ್ಳೆಯ ಪರಿಣಾಮವಾಗಲಿ" ಎಂದನು ಸಾಧು.

ರಾಘವಯ್ಯ ಅತ್ಯಂತ ವಿನಯದಿಂದ "ಪ್ರಯಾಣದ ಖರ್ಚನ್ನು ಕುರಿತು ತಾವೇನೂ ಹಿಂಜರಿಯ ಬೇಕಾಗಿಲ್ಲ. ದೇವರ ದಯದಿಂದಲೂ, 'ನಿಮ್ಮ ಒಳ್ಳೆಯ ಆಶೀರ್ವಾದದಿಂದಲೂ ಅದನ್ನೆಲ್ಲಾ ತಾಳಿಕೊಳ್ಳುವ ಸ್ಥಿತಿಯಲ್ಲಿದ್ದೇನೆ ಸ್ವಾಮಿ" ಎಂದನು.

ಸಾಧು ಮುಗುಳು ನಗುತ್ತ "ನಿನಗೆ ನನ್ನ ಮೇಲಿರುವ ಶ್ರದ್ಧೆಯನ್ನು ನೋಡಿ ಸಂತೋಷವಾಯಿತು. ತೀರ್ಥಯಾತ್ರೆಗಳಿಂದ ಮನುಷ್ಯರ ಅಂತರಂಗ ಬಹಿರಂಗಗಳು ಪುನೀತವಾಗುವುದೆಂಬ ನಂಬುಗೆ ಇದ್ದವರು ಯಾತ್ರೆ ಮಾಡಬೇಕಿನ್ನಿ, ಹಾಗೆ ನೀವೆಲ್ಲಾ ಪುಣ್ಯವಂತರಾಗಿ ಬಂದರೆ ನಿಮಗಿಂತ ಹೆಚ್ಚು ಸಂತೋಷ ನನಗಾಗುತ್ತದೆ. ಈ ನಿಮ್ಮ ಯಾತ್ರೆಯಲ್ಲಿ ನನಗೊಂದು ಸಣ್ಣ ಉಪಕಾರ ಮಾಡಿದರೆ ಸಾಕು." ಎಂದು ಕುಟೀರದೊಳಗೆ ಹೋಗಿ ಚಿಕ್ಕದೊಂದು

ಪ್ರಯಾಣವು ರಾಘವಯ್ಯನಿಗಿಂತಲೂ ದೊಡ್ಡ ಪ್ರಯಾಣವಲ್ಲವೆನ್ನುವಿರಾ ? ಉತ್ತರ ದೇಶಗಳ ತೀರ್ಥಯಾತ್ರೆ ಕೈಗೊಂಡ ನಾನು, ಅವನಿಗಿಂತ ಹೆಚ್ಚು ಪುಣ್ಯಕ್ಷೇತ್ರಗಳನ್ನು ದರ್ಶಿಸುತ್ತೇನಲ್ಲಾ ! ತಾವೂ ನಮ್ಮೊಂದಿಗಿದ್ದರೆ ಆಗಾಗ ತಮ್ಮ ಬೋಧನೆಗಳನ್ನು ಕೇಳುತ್ತಾ, ಯಾತ್ರೆ ಇನ್ನೂ ಹೆಚ್ಚಿನ ವಿಶೇಷವಾಗುತ್ತೆ." ಎಂದನು ಭದ್ರಯ್ಯ.

"ಇಷ್ಟೊಂದು ಗೌರವವನ್ನು ನನ್ನ ಮೇಲಿಟ್ಟಿರುವ ನಿನ್ನನ್ನು ನಿರಾಶೆ ಪಡಿಸುವುದು ಸರಿಯಲ್ಲ. ಅದಕ್ಕಾಗಿ ಒಂದು ಕೆಲಸ ಮಾಡು. ನಾನು ನಿನ್ನ ಕೈಗೆ ಸಣ್ಣದೊಂದು ಗಂಟು ಕೊಡುತ್ತೇನೆ. ಅದನ್ನು ನೀವುಗಳು ಮುಳುಗುವ ಎಲ್ಲಾ ತೀರ್ಥಗಳಲ್ಲಿಯೂ ಮುಳುಗಿಸಿ ಹಿಂದಿರುಗಿ ತಂದು ನನಗೆ ಕೊಡು. ಆ ಗಂಟಿನ ರೂಪದಲ್ಲಿ ನಾನೂ ನಿಮ್ಮೊಂದಿಗೆ ಇರುವ ಹಾಗೇ ತಿಳಿದುಕೋ." ಎಂದು ರಾಘವಯ್ಯನಿಗೆ ಕೊಟ್ಟ ಹಾಗೆಯೇ ಅವನಿಗೂ ಒಂದು ಮೂಟೆಯನ್ನು ಕೊಟ್ಟು ಕಳುಹಿಸಿದನು ಸಾಧು.

ರಾಘವಯ್ಯನೂ ಭದ್ರಯ್ಯನೂ ತಮ್ಮ ತಮ್ಮ ಯಾತ್ರೆಗಳನ್ನು ಮುಗಿಸಿಕೊಂಡು, ಆರು ತಿಂಗಳ ಮೇಲೆ ತಮ್ಮ ಗ್ರಾಮವನ್ನು ಸೇರಿದರು. ರಾಘವಯ್ಯನು ಎರಡು ವಾರಗಳ ಮೊದಲೇ ಬಂದು ತನ್ನ ಮೂಟೆಯನ್ನು ಸಾಧುವಿಗೆ ಕೊಟ್ಟನು. ಭದ್ರಯ್ಯನೂ ಬಂದು ಸಾಧು ಕೊಟ್ಟ ಮೂಟೆಯನ್ನು ಹಿಂದಿರುಗಿಸಿಕೊಟ್ಟನು.

ಆಮೇಲೆ ಸಾಧು ಅವರಿಬ್ಬರನ್ನೂ ಆಶೀರ್ವಾದ ಮಾಡಲು ತನ್ನ ಕುಟೀರದ ವಠಾರದಲ್ಲಿ ಒಂದು ದಿನ ಔತಣವನ್ನು ಏರ್ಪಡಿಸಿ ಅವರಿಬ್ಬರನ್ನೂ ಆಹ್ವಾನಿಸಿದನು.

ಊಟದ ವೇಳೆಯಲ್ಲಿ ಭದ್ರಯ್ಯನು ತನ್ನವರೊಂದಿಗೆ ಒಂದು ಸಾಲಿನಲ್ಲಿಯೂ, ಹಾಗೆಯೇ ರಾಘವಯ್ಯನು ಇನ್ನೊಂದು ಸಾಲಿನಲ್ಲಿಯೂ ಕುಳಿತರು. ಸಾಧುವಿನ ಶಿಷ್ಯರು ಬಡಿಸುತ್ತಿದ್ದರು.

ರಾಘವಯ್ಯ, ಭದ್ರಯ್ಯ ಹಾಗೂ ಅವರ ಅನುಚರರು ಅಡಿಗೇ ಪದಾರ್ಥಗಳ ರುಚಿಯನ್ನು ಶ್ಲಾಘಿ



ಸುತ್ತಾ ಭೋಜನ ಮಾಡುತ್ತಿದ್ದರು. ಕಡೆಗೆ ಸಾಧು ಅವರೆಲ್ಲರನ್ನೂ ನೋಡಿ, "ಅಪ್ಪಗಳಿರಾ, ತೀರ್ಥಯಾತ್ರೆ ಮಾಡಿ ಪುಣ್ಯಾತ್ಮರಾಗಿ ಹಿಂದಿರುಗಿದ ನಿಮ್ಮ ಜತೆಯಲ್ಲಿ ನಾನು ತರಿಸಿಕೊಂಡ ಪುಣ್ಯವನ್ನು ಕೂಡಾ ನಿಮ್ಮೆಲ್ಲರಿಗೂ ಹಂಚಿಕೊಡುವ ಏರ್ಪಾಡು ಮಾಡಿದ್ದೇನೆ. ಅದರ ರುಚಿಯನ್ನು ನೀವೀಗ ನೋಡುವಿರಿ" ಎಂದು ಶಿಷ್ಯರನ್ನು ನೋಡಿ ಆ ಪಾಯಸವನ್ನು ತಂದು ಬಡಿಸುವಂತೆ ಹೇಳಿದನು.

ಶಿಷ್ಯರು ಪಾಯಸ ಬಡಿಸಿಕೊಂಡು ಹೋದರು. ಅದರ ರುಚಿ ನೋಡಿದ ಕೂಡಲೇ ಎಲ್ಲರ ಮುಖಗಳೂ ವಿಕಾರವಾದುವು.

"ಏಕೆ? ಏನಾಯಿತು? ಪುಣ್ಯ ವಿಶೇಷದ ಪಾಯಸ ಅದ್ಭುತವಾಗಿರಬೇಕಲ್ಲಾ!" ಎಂದನು ಸಾಧು.

"ಕೆಟ್ಟ ಕಹಿ! ನೆತ್ತಿಗೇರುವ ಕಹಿ! ಎಂದರು ಎಲ್ಲರೂ.

"ಹಾಗೇನು? ನನ್ನ ನಂಬುಗೆ ತಪ್ಪಾಯಿತು. ನಾನು ನಿಮ್ಮ ಹತ್ತಿರ ಕೊಟ್ಟು ಕಳಿಸಿದ್ದು ಒಣ ಹಾಗಲಕಾಯನ್ನೇ. ನಿಮ್ಮೊಂದಿಗೆ ಅದೂ ಪುಣ್ಯ ತೀರ್ಥಗಳಲ್ಲಿ ಮಿಂದು ಕಹಿಯನ್ನು ಕಳೆದುಕೊಂಡಿರಬೇಕೆಂದು ನಂಬಿದ್ದೆ. ಜೇನಿನಂತಾಗಿದೆಯೆಂದು ಮಾಡಿದ್ದೆ. ಏಕೆಂದರೆ ನಿಮಗೆ ಪುಣ್ಯಕ್ಷೇತ್ರಗಳ ಮೇಲೆ ಅಷ್ಟು ಭಕ್ತಿ, ಶ್ರದ್ಧೆ ನಂಬಿಕೆಗಳಿದ್ದುವಲ್ಲ?" ಎಂದನು. ಸಾಧುವಿನ ಮಾತಿನೊಳಗಿರುವ ಗೂಢಾರ್ಥವನ್ನು ಎಲ್ಲರೂ ತಿಳಿದರು. ಎಲ್ಲರೂ ಕೈ ಬಾಯಿ ತೊಳೆದುಕೊಂಡು ಅಪ್ಪಣೆ ಪಡೆಯಲು ಸಾಧುವಿನ ಹತ್ತಿರ ಬಂದರು.

ಸಾಧು ಅವರೊಂದಿಗೆ "ಹಾಗಲಕಾಯಿಯೇನೋ ಸಹಜ ಕಹಿಯ ಜಡ ಪದಾರ್ಥ. ಆದುದರಿಂದಲೇ ಅದರ ಗುಣದಲ್ಲಿ ಪುಣ್ಯ ಪಾಪಗಳಿಂದ ಯಾವ ಬದಲಾವಣೆಯೂ ಆಗಲಿಲ್ಲ. ಆಗುವುದೂ ಇಲ್ಲ. ಆದರೆ ಮನುಷ್ಯರು ಹಾಗಲ್ಲ. ಅನುಭವಗಳಿಂದ ಗುಣದಲ್ಲಿಯೂ ಮಾರ್ಪಾಡಾಗಬಲ್ಲವರು. ಹಾಗೇ ನೀವೆಲ್ಲಾ ನಿಜವಾಗಿ ಮನುಷ್ಯರಾಗಿರಬೇಕೆಂಬುದೇ ನನ್ನ ಉದ್ದೇಶ" ಎಂದನು.

ಆ ಮಾತು ಕೇಳಿದ ಕೂಡಲೇ ರಾಘವಯ್ಯ, ಭದ್ರಯ್ಯ ಇಬ್ಬರೂ "ನಾವೀಗ ಮನುಷ್ಯರಾದೆವು" ಎಂದು ಒಂದೇ ಸಾರಿ ಹೇಳಿ ಕೈ ಕೈ ಹಿಡಿದುಕೊಂಡು, "ಸ್ವಾಮಿ! ನೀವು ನಮ್ಮ ಕಣ್ಣು ತೆರೆಸಿದಿರಿ. ನಾವು ಹಾಗಲಕಾಯಿಯಂಥವರಲ್ಲವೆಂದು ನಂಬಿರಿ. ಇನ್ನು ನಮ್ಮೊಳಗೆ ಸ್ನೇಹವೇ ಹೊರತು ವೈರಕ್ಕೆ ಜಾಗವಿಲ್ಲ!" ಎಂದರು.

"ಇದೇ ನಿಜವಾದ ಯಾತ್ರಾ ಫಲ!" ಎಂದು ಎಲ್ಲರನ್ನೂ ಆಶೀರ್ವಾದ ಮಾಡಿದನು ಸಾಧು.






ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ ಮಹಾತ್ಮಾ ಬೋಧಿಸತ್ವನು ಒಬ್ಬ ಬ್ರಾಹ್ಮಣನ ಮಗನಾಗಿ ಹುಟ್ಟಿದನು. ಹುಟ್ಟುವಾಗಲೇ ಕುಬ್ಜ ಪ್ರಕೃತಿಯವನಾಗಿದ್ದುದರಿಂದ, ಬೆಳೆಯುತ್ತಿದ್ದರೂ ಕುಳ್ಳನಾಗಿಯೇ ಇದ್ದನು. ಅಂತಲೇ ಕುಬ್ಜನೆಂಬ ಹೆಸರಿನವನೇ ಆದನು. ಆದರೆ ಕುಬ್ಜನು ಪ್ರತಿಯೊಂದರಲ್ಲಿಯೂ ಬಹಳ ಜಾಣ, ಚಿಕ್ಕ ಪ್ರಾಯದಲ್ಲಿಯೇ ತಕ್ಷಶಿಲೆಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತ, ಪ್ರತ್ಯೇಕವಾಗಿ ಧನುರ್ವಿದ್ಯೆಯನ್ನೂ ಕಲಿತು. ಪ್ರವೀಣನೆನಿಸಿಕೊಂಡನು.

ಆಮೇಲೆ ಕುಬ್ಜನಿಗೆ ತನ್ನ ಬಿಲ್ಲುಗಾರಿಕೆಯ ವಿದ್ಯೆಯಿಂದಲೇ ಬದುಕು ಸಾಗಿಸಬೇಕೆಂದು ತೋರಿತು. ಅದಕ್ಕಾಗಿ ಅವನು ಅನೇಕ ದೇಶಗಳನ್ನು ತಿರುಗಿ, ಅನೇಕ ರಾಜರ ದರ್ಶನ ಮಾಡಿ, ತಾನು ಧನುರ್ವಿದ್ಯೆಯಲ್ಲಿ ಪ್ರವೀಣನೆಂದು ಹೇಳಿ ನೋಡಿದನು. ಆದರೆ ಆಕಾರದಲ್ಲಿ ಕುಳ್ಳನಾಗಿದ್ದುದರಿಂದ, ಯಾವ ರಾಜನಿಗೂ ಅವನನ್ನು ಇಟ್ಟುಕೊಳ್ಳಬೇಕೆಂದು ತೋರಲಿಲ್ಲ.

ತನ್ನ ವಿದ್ಯೆಗೆ ತಕ್ಕ ಉದ್ಯೋಗವನ್ನು ದೊರಕಿಸಿಕೊಳ್ಳಲು ಏನು ಮಾಡಬೇಕೆಂದು ಕುಬ್ಜನು ಚಿಂತಿಸುತ್ತಾ, ಒಂದಾನೊಂದು ಊರಿನ ಬೀದಿಯಲ್ಲಿ ನಡೆಯುತ್ತಿದ್ದನು. ಅದೊಂದು ಜಾಡರ ಬೀದಿ. ಮಗ್ಗಗಳಿಂದ ಹೊರಡುವ ಲಟಪಟ ಶಬ್ದಗಳು ಕೇಳುತ್ತಾ ಇದ್ದಿತು. ಒಂದು ಕಡೆಯಲ್ಲಿ ಮಗ್ಗ ಹಾಡಿಸಿಕೊಂಡಿದ್ದ ಆಜಾನುಬಾಹುವಾದ ಒಬ್ಬ ಮನುಷ್ಯನನ್ನು ನೋಡಿ ಕುಬ್ಜನು ನಿಂತನು.

ಅನಂತರ ಅವನ ಬಳಿಗೆ ಹೋಗಿ. "ನಿನ್ನ ಹೆಸರೇನಯ್ಯ ?" ಎಂದು ಕೇಳಿದನು.

"ಭೀಮಸೇನ. ಏಕೆ ?" ಎಂದನು ಆ ಜಾಡ.

"ಮತ್ತೇನಿಲ್ಲ, ನಾನು ಕುಳ್ಳನಾದುದರಿಂದ ಕುಬ್ಜನೆಂದೇ ನನ್ನ ಹೆಸರು. ನಿನಗೂ ತಕ್ಕ ಹೆಸರೇ ಇದೆ. ಇಷ್ಟು ದೊಡ್ಡ ಹೆಸರಿನೊಂದಿಗೆ ಅದಕ್ಕೆ ತಕ್ಕ ಹಾಗೆಯೇ ಇರುವ ನೀನು ಈ ಮಗ್ಗದ ಕೆಲಸದಲ್ಲಿರುವುದು ಏನೂ ಚೆನ್ನಾಗಿಲ್ಲ." ಎಂದನು ಕುಬ್ಜ.

"ಅದಕ್ಕೇನು ಮಾಡಲಿ ? ಬಟ್ಟೆ ನೇಯುವುದರ ಹೊರತು ಬೇರೆ ಕೆಲಸ ಯಾವುದೂ ನನಗೆ·ಬಾರದು" ಎಂದನು ಭೀಮಸೇನ. "ಕೈತುಂಬಾ ಸಂಪಾದಿಸುವಂತಹ ಉಪಾಯ ನಾನು ಹೇಳುತ್ತೇನೆ. ನನ್ನೊಂದಿಗೆ ಬರುವಿಯಾ ?" ಎಂದು ಕೇಳಿದನು ಕುಬ್ಜ.



ಆ ಪ್ರಕಾರವೇ ಭೀಮಸೇನನು ಕಾಶೀರಾಜನ ಬಳಿಗೆ ಹೋಗಿ, ತಾನು ದೊಡ್ಡ ಬಿಲ್ಲುಗಾರನೆಂದು ಹೇಳಿ ಸುಲಭವಲ್ಲೇ ಉದ್ಯೋಗ ಸಂಪಾದಿಸಿಕೊಂಡನು. ಅವನ ಸಂಬಳ ಪಕ್ಷಕ್ಕೆ ಸಾವಿರ ರೂಪಾಯಿ. ಕುಬ್ಜನು ಅವನ ಕೈ ಕೆಳಗಿನ ಭಟನಾಗಿದ್ದನು.

ಹೀಗಿರುವಾಗ ಕಾಶಿಯ ಪ್ರಜೆಗಳಿಗೆ ಒಂದು ದೊಡ್ಡ ಕಷ್ಟ ಬಂದಿತು. ನಗರದ ಸಮೀಪದಲ್ಲಿದ್ದ ಕಾಡಿನ ಕಡೆಯಿಂದ ಹೆಬ್ಬುಲಿಯೊಂದು ದಾರಿಗಳಲ್ಲಿ ಹೊಂಚಿದ್ದು, ಮನುಷ್ಯರನ್ನು ಹಿಡಿದು ಕೊಂದು ತಿಂದು ರುಚಿ ಹಿಡಿದಿತ್ತು.

ಆ ನರಭಕ್ಷಕ ಹುಲಿಯ ಸಮಾಚಾರ ತಿಳಿದು ರಾಜನು ಭೀಮಸೇನನ್ನು ಕರೆದು, ಆ ನರಭಕ್ಷಕ ಹೆಬ್ಬುಲಿ ಇರುವ ಸ್ಥಳವನ್ನು ವಿವರಿಸಿ, "ಅದನ್ನು ಕೊಂದು ಪ್ರಜೆಗಳ ಭಯವನ್ನು ನಿವಾರಿಸ ಬೇಕಾದುದು ನಿನ್ನ ಹೊಣೆ" ಎಂದು ಆಜ್ಞೆ ಮಾಡಿದನು.

ಭೀಮಸೇನನು ಸಂತೋಷದಿಂದ ಒಪ್ಪಿದನು. ಅನಂತರ ಕುಬ್ಜನು ಭೀಮಸೇನನನ್ನು ಕರೆದುಕೊಂಡು ಕೆಲವು ದಿನಗಳಲ್ಲಿ ಕಾಶೀರಾಜ್ಯವನ್ನು ಸೇರಿದನು.

ಅಲ್ಲಿಗೆ ಹೋದ ಮೇಲೆ ಕುಬ್ಜನು ಭೀಮಸೇನ ನನ್ನು ನೋಡಿ, ನೀನು ಮಹಾರಾಜನ ಬಳಿಗೆ ಹೋಗಿ, ನೀನು ಬಿಲ್ಲುಗಾರಿಕೆಯಲ್ಲಿ ಸಾಟಿಯಿಲ್ಲದ ವೀರನೆಂದು ಹೇಳಿಕೊಂಡು ಉದ್ಯೋಗ ಕೇಳು. ನಿನ್ನನ್ನು ನೋಡಿ ಕೂಡಲೇ ಉದ್ಯೋಗ ಕೊಡು ತ್ತಾರೆ" ಎಂದು ಹೇಳಿದನು.

"ನನಗೆ ಬಿಲ್ಲು ಹಿಡಿಯಲಿಕ್ಕೂ ಗೊತ್ತಿಲ್ಲವಲ್ಲಾ ?" ಎಂದನು ಭೀಮಸೇನ.

"ನಿನಗೆ ಆ ವಿದ್ಯೆ ಗೊತ್ತಿರಬೇಕಾಗಿಲ್ಲ. ನನಗೆ ಆ ವಿದ್ಯೆ ಚೆನ್ನಾಗಿ ಗೊತ್ತಿದೆ. ನನ್ನನ್ನು ನಿನ್ನ ಭಟ ನಾಗಿ ಇಟ್ಟುಕೋ. ಅಗತ್ಯ ಬಂದಾಗ ನಾನು ನಿನ್ನೊಂದಿಗಿದ್ದು ಸಹಾಯ ಮಾಡುತ್ತೇನೆ" ಎಂದು ಕುಬ್ಜನು ಧೈರ್ಯ ಹೇಳಿದನು.

ಭೀಮಸೇನನು ಅದಕ್ಕೆ ಒಪ್ಪಿಕೊಂಡು, ಕುಬ್ಜನ ಹತ್ತಿರ ಬಂದು, "ಈಗ ನನ್ನ ಮೇಲೆ ಈ ದೊಡ್ಡ ಕಷ್ಟ ಬಂದಿತಲ್ಲ ? ನಾನು ಆ ಹೆಬ್ಬುಲಿಯನ್ನು ಹೇಗೆ ಕೊಂದೇನು ? ಈ ಗಂಡಾಂತರದಿಂದ ತಪ್ಪುವ ಉಪಾಯವನ್ನು ನೀವೇ ಹೇಳಬೇಕು" ಎಂದನು.

"ಏನೂ ಹೆದರಬೇಡ. ನಾನು ಹೇಳಿದ ಹಾಗೆ ಕೇಳು. ಹುಲಿಯನ್ನು ಒಬ್ಬನೇ ಕೊಲ್ಲಲು ಸಾಧ್ಯ ವಿಲ್ಲ. ಊರ ಹೊರಗೆ ಹೋದ ಕೂಡಲೇ, ನಾನು ಹೆಬ್ಬುಲಿಯನ್ನು ಕೊಲ್ಲುತ್ತೇನೆ. ಎಲ್ಲರೂ ನೋಡಲು ಬನ್ನಿ. ಎಲ್ಲರ ಕೈಯಲ್ಲಿಯೂ ಆಯುಧವೇನಾದರೂ ಸುಮ್ಮನೆ ಇರಲಿ' ಎಂದು ಹೇಳುತ್ತಾ ಹೋಗು, ಹಾಗೆ ಕೂಡಿದ ಎರಡು ಸಾವಿರ ಮಂದಿಯೊಂದಿಗೆ, ಹಲಿ ಹೊಂಚಿರುವ ಸ್ಥಳಕ್ಕೆ ಹೋಗು. ಹುಲಿಯ ಗರ್ಜನೆ ಕೇಳಿದ ಕೂಡಲೇ ಯಾವ ಪೊದರಿನೊಳಗೋ ತೂರಿ ಅಡಗಿರು. ನಿನ್ನೊಂದಿಗಿದ್ದ ಜನರೇ ಆ ಹುಲಿ

ಯನ್ನು ಕೊಂದು ಹಾಕಿಬಿಡುತ್ತಾರೆ. ಯಾರ ಪೆಟ್ಟಿನಿಂದ ಅದು ಸತ್ತಿತೋ ಗೊತ್ತಾಗದು.

ಹುಲಿ ಸಾಯುವ ವರೆಗೂ ಅಡಗಿಕೊಂಡಿರುವ ನೀನು, ಹುಲಿ ಸತ್ತು ಬಿದ್ದ ಕೂಡಲೇ ಉದ್ದವಾದ ಬಳ್ಳಿಯೊಂದನ್ನು ಕಡಿದು ಕೈಯಲ್ಲಿ ಬೀಸಿಕೊಂಡು ಇತ್ತಕಡೆಗೆ ಬಾ. ಆಮೇಲೆ ಹುಲಿ ಸತ್ತು ಬಿದ್ದುದನ್ನು ನೋಡಿ ಕೋಪ ಅಭಿನಯಿಸು. 'ಆರರೇ! ಈ ಹುಲೀನ ಜೀವದೊಂದಿಗೆ ಕಟ್ಟಿ ಎಳೆದೊಯ್ದು ಮಹಾರಾಜರಿಗೆ ಕೊಡಬೇಕೆಂದಿದ್ದರೆ, ಯಾರೋ ಕೊಂದೇ ಬಿಟ್ಟರಲ್ಲಾ! ಇದನ್ನು ಕೊಲ್ಲಬೇಕಾದರೆ ನಾನೇಕೆ ಬರಬೇಕಿತ್ತು! ನೀವೇ ಸಾಕಲ್ಲ? ಯಾರು ಇದನ್ನು ಕೊಂದವರು? ಹೇಳಿರಿ. ಅವರಿಗೆ ಶಿರಚ್ಛೇದ ಶಿಕ್ಷೆ ಕೊಡಿಸುತ್ತೇನೆ' ಎಂದು ಗಟ್ಟಿಯಾಗಿ ಕೂಗಾಡು. ಜನರು ಹೆದರಿ ಹುಲಿಯನ್ನು ಕೊಂದುದು ನಾನಲ್ಲ ತಾನಲ್ಲವೆನ್ನುತ್ತಾರೆ. ಆಗ ನೀನು ಹಿಂದಿರುಗಿ ಬಂದು ಮಹಾರಾಜರೊಂದಿಗೆ ಹುಲಿಯನ್ನು ಜೀವದೊಂದಿಗೆ ಹಿಡಿಯುವಾಗ ಕೊಲ್ಲಬೇಕಾಯಿತೆಂದು ಹೇಳು. ನೀನು ಹೇಳಿದ್ದು ಸುಳ್ಳು ಎಂದು ಹೇಳಲು ಯಾರಿಗೂ ಸಾಹಸವಾಗದು" ಎಂದು ಕುಬ್ಜನು ಹೇಳಿಕೊಟ್ಟನು.

ಭೀಮಸೇನನು ಅವನು ಹೇಳಿದ ಹಾಗೆಯೇ ಬಹು ಚೆನ್ನಾಗಿ ಅಭಿನಯಿಸಿದನು. ಊರವರಿಂದಲೇ ವ್ಯಾಘ್ರ ಸಂಹಾರವಾಯಿತು. ಅದು ಸತ್ತು ಬಿದ್ದ ಕೂಡಲೇ ಭೀಮಸೇನನು ಬಳ್ಳಿಯೊಂದಿಗೆ ಪ್ರತ್ಯಕ್ಷನಾಗಿ, ತಾನು ಸ್ವಲ್ಪ ಕಣ್ಮರೆಯಾದ ಮಾತ್ರಕ್ಕೇ ಹುಲಿಯನ್ನು ಕೊಂದುಬಿಟ್ಟಿರಲ್ಲಾ ಎಂದು ಊರವರ ಮೇಲೆ ಹಾರಿ ಬಿದ್ದನು. ಅದನ್ನು ಕೊಂದವರ ತಲೆ ಹಾರುತ್ತದೆಂದು ಕೂಗಿದನು. ಗ್ರಾಮಸ್ಥರೆಲ್ಲ ಹೆದರಿ ಅವರವರ ಪಾಡಿಗೆ ಜಾರಿಕೊಂಡರು.

ಭೀಮಸೇನನು ನಗರಕ್ಕೆ ತಿರುಗಿ ಬಂದು ರಾಜನನ್ನು ನೋಡಿ, "ಮಹಾರಾಜರೇ, ತಮ್ಮ ಆಜ್ಞೆಯಂತೆ ದೊಡ್ಡ ಹುಲಿಯನ್ನು ಜೀವಂತ ಹಿಡಿದು



ತಂದು ಮೃಗಶಾಲೆಯಲ್ಲಿಡಿಸಲಾಗುವುದೋ ನೋಡಿದರೆ, ಅದು ನನಗೆ ವಿಪರೀತ ಕೋಪ ಬರುವಂತೆ ಮಾಡಿತು. ಕೊಂದುಬಿಟ್ಟೆನು" ಎಂದನು.

ರಾಜನು ಭೀಮಸೇನನ ಪರಾಕ್ರಮಕ್ಕೆ ಬಹಳ ಸಂತೋಷಪಟ್ಟನು. ಎಲ್ಲರೂ ಅವನನ್ನು ಪ್ರಶಂಸಿಸುವವರೇ. ಈ ಪ್ರಶಂಸೆಗಳನ್ನು ಕೇಳುತ್ತಾ ಭೀಮಸೇನನು ತಾನು ನಿಜಕ್ಕೂ ಮಹಾವೀರನೇ ಆಗಿಬಿಟ್ಟೆನೆಂದುಕೊಂಡು ತನಗೆ ಬಂಟನಾಗಿರುವ ಕುಳ್ಳನನ್ನು ಸಣ್ಣ ದೃಷ್ಟಿಯಿಂದ ನೋಡಲಿಕ್ಕೂ ಶುರು ಮಾಡಿದನು. ಆದರೆ ಕುಬ್ಜನಿಗೆ ಇದು ಗೊತ್ತಾದರೂ ಅದನ್ನು ಸ್ವಲ್ಪವೂ ಹಚ್ಚಿಕೊಳ್ಳಲಿಲ್ಲ.

ಹೀಗಿರುವಾಗ ಕಾಶೀರಾಜ್ಯದ ಮೇಲೆ ಶತ್ರುರಾಜನೊಬ್ಬನು ದಂಡೆತ್ತಿ ಬಂದು ನಗರವನ್ನು ತನ್ನ ಸೈನ್ಯಗಳಿಂದ ಮುತ್ತಿಗೆ ಹಾಕಿದನು. "ಯುದ್ಧಕ್ಕೆ ಬರುವಿಯಾ? ಶರಣಾಗುವಿಯಾ?" ಎಂದು ಕಾಶೀರಾಜನಿಗೆ ಸವಾಲು ಕಳುಹಿಸಿದನು.

ರಾಜನು ಭೀಮಸೇನನನ್ನು ಕರೆದು, "ಅಗತ್ಯವಿದ್ದಷ್ಟು ಸೈನ್ಯ ತೆಗೆದುಕೊಂಡು ಹೋಗಿ ಆ ಶತ್ರುವನ್ನು ಜಯಿಸಿ ಬರಬೇಕಾದುದು ನಿನ್ನ ಹೊಣೆ" ಎಂದು ಆಜ್ಞೆ ಮಾಡಿದನು. ಭೀಮಸೇನನು ಉಪಾಯವಿಲ್ಲದೆ ಕವಚವನ್ನು ತೊಟ್ಟು ಶಿರಸ್ತ್ರಾಣ ಧರಿಸಿ, ಕತ್ತಿ ಬಿಲ್ಲುಬಾಣಗಳೊಂದಿಗೆ ಆನೆಯ ಮೇಲೇರಿದನು.

ಹೀಗೆ ಸೈನ್ಯಗಳ ನಡುವೆ ಅವನು ರಣರಂಗಕ್ಕೆ ಹೋಗುವಾಗ, ಅವನಿಗೆ ಗಂಡಾಂತರ ಬರುವುದೆಂದು ಕುಬ್ಜನಿಗೆ ಗೊತ್ತಿತ್ತು. ಅವನೂ ತನ್ನ ಒಂಟಿನ ರಕ್ಷಣೆಯನ್ನೇ ಇದಿರು ನೋಡುತ್ತಿದ್ದನು. ಹೆಚ್ಚು ಸತಾಯಿಸಬಾರದೆಂದುಕೊಂಡು ಕುಬ್ಜವೀರನು ಬಿಲ್ಲು ಬಾಣಗಳನ್ನು ತೆಗೆದುಕೊಂಡು ಆನೆಯ ಮೇಲೆ ಹಾರಿ ಭೀಮಸೇನನ ಹಿಂದೆಯೇ ಕುಳಿತನು. ಸುತ್ತಲೂ ಅಶ್ವದಳವೂ, ಪದಾತಿದಳವೂ ನಡೆಯುತ್ತಿರಲು, ಭೀಮಸೇನ ಮತ್ತು ಕುಬ್ಜರೊಂದಿಗೆ ಆನೆ ಯುದ್ಧ ರಂಗಕ್ಕೆ ಹೋಯಿತು.

ಖಡ್ಗ ಈಟಿಗಳನ್ನು ಝಳಪಿಸುತ್ತ ಸಾಲುಸಾಲಾಗಿ ನಿಂತಿರುವ ಶತ್ರು ಸೇನೆಯನ್ನು ನೋಡಿದ ಕೂಡಲೇ ಭೀಮಸೇನನಿಗೆ ನಡುಕ ಹುಟ್ಟಿತು. ಕೈ ಕಾಲುಗಳು ತಣ್ಣಗಾದುವು. ಅವನು ಆನೆಯ ಮೇಲಿನಿಂದ ಜಾರಿ ಬೀಳುವುದನ್ನು ಕುಬ್ಜನು ನೋಡಿ, ಬೀಳದಂತೆ ಗಟ್ಟಿಯಾಗಿ ಹಿಡಿದನು. ಆದರೂ ಅವನು ಕೆಳಗೆ ಹಾರಿ ಓಡಲು ನೋಡುವುದನ್ನು ನೋಡಿ, ಕುಬ್ಜನು ಅವನು ಹಾರಲಾಗದಂತೆ ಆನೆಯ ಮೇಲೆ ಕಟ್ಟಿ ಹಾಕಿದನು. ಇಲ್ಲದಿದ್ದರೆ ಕುದುರೆ ಆನೆಗಳ ಕಾಲಿಗೆ ಸಿಕ್ಕಿ ಅವನು ಸಾಯುತ್ತಿದ್ದನು.

ಇಷ್ಟಾದ ಮೇಲೆ ಕುಬ್ಜವೀರನು ತಾನೇ ನಾಯಕತ್ವ ವಹಿಸಿಕೊಂಡನು. ಅವನು ಗಟ್ಟಿಯಾಗಿ ಜಯಘೋಷ ಮಾಡುತ್ತ ಆನೆಯನ್ನು ಹುರುಡಿಸಿ, ಸುಳಿಗಾಳಿಯಂತೆ ಶತ್ರು ಸೇನೆಯೊಳಗೆ ತೂರಿ ಬಾಣಗಳ ಮಳೆಯನ್ನೇ ಸುರಿಸತೊಡಗಿದನು. ನೇರಾಗಿ ಶತ್ರು ರಾಜನ ಸಮೀಪಕ್ಕೆ ಹೋದನು. ಅವನ ಬಾಣಗಳ ಹಾವಳಿಯಿಂದ ಶತ್ರುಗಳ ಯಾವ ಆಯುಧವೂ ಪ್ರಯೋಜನಕ್ಕೆ ಬರಲಿಲ್ಲ. ಸೇನೆಗಳೆಲ್ಲಾ ಚೆಲ್ಲಾ ಚೆದರಾಗಿ ಓಡಿದುವು. ಸ್ವಲ್ಪ ಹೊತ್ತಿನೊಳಗೆ ಶತ್ರು ರಾಜನು ಗಾಯಗೊಂಡನು. ಕುಬ್ಜವೀರನು ಅವನನ್ನು ಬಂದೀ ಮಾಡಿಸಿ ಎಳೆಯಿಸಿಕೊಂಡು ಯುದ್ಧ ರಂಗದಿಂದ ಹಿಂದಿರುಗಿದನು.

ಕುಬ್ಜವೀರನು ಎಂತಹ ಧನುರ್ವಿದ್ಯಾ ಪ್ರವೀಣನೆಂಬುದು ಕಾಶೀರಾಜನಿಗೆ ಗೊತ್ತಾಯಿತು. ಆಮೇಲೆ ರಾಜನು ಕುಬ್ಜವೀರನನ್ನು ಸೇನಾ ನಾಯಕನನ್ನಾಗಿ ನಿಯಮಿಸಿದನು. ಕುಬ್ಜವೀರನು ಭೀಮಸೇನನಿಗೆ ಸಾಕಾಗುವಷ್ಟು ಬಹುಮಾನಗಳನ್ನು ಕೊಟ್ಟು ಸಂತೋಷಪಡಿಸಿ ಅವನನ್ನು ಕಳುಹಿಸಿಕೊಟ್ಟನು.





# ಅಕ್ಬರ್ ಚಕ್ರವರ್ತಿ-೧

ಹುಮಾಯೂನ್ ಸಾಯುವ ಕಾಲದಲ್ಲಿ ಅವನ ಕುಮಾರನಾದ ಜಲಾಲುದ್ದೀನ್ ಮಹಮ್ಮದ್ ಅಕ್ಬರ್ ಪಂಜಾಬಿನಲ್ಲಿದ್ದನು. ಅಕ್ಬರನಿಗೆ ಹದಿನಾಲ್ಕನೆಯ ವಯಸ್ಸಿನಲ್ಲಿ ಮೊಗಲ್ ಸಾಮ್ರಾಜ್ಯದ ಪಟ್ಟಾಭಿಷೇಕವಾಯಿತು. ಹುಮಾಯೂನನ ಮಿತ್ರ ಭೈರಂಖಾನ್ ಅಕ್ಬರನ ಸಂರಕ್ಷಕನಾಗಿದ್ದನು.

ರಾಜ್ಯಾಧಿಕಾರವು ಕೈಗೆ ಬಂದ ಕೂಡಲೇ ಅಕ್ಬರ್ ಎಷ್ಟೋ ಸಮಸ್ಯೆಗಳನ್ನು ಇದಿರಿಸಬೇಕಾಯಿತು. ಷೇರ್‌ಷಹನ ವಂಶಕ್ಕೆ ಸೇರಿದ ಹೇಮು ಎಂಬ ಸೇನಾನಾಯಕನು ಢಿಲ್ಲಿಯನ್ನೂ ಆಗ್ರಾವನ್ನೂ ಆಕ್ರಮಿಸಿದನು. ಪಾನಿಪಟ್ಟಿನ ಹತ್ತಿರ ಅಕ್ಬರನಿಗೂ ಹೇಮುವಿಗೂ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವೇ ಎರಡನೇ ಪಾನಿಪಟ್ ಯುದ್ಧವೆಂದು ಚರಿತ್ರೆಯಲ್ಲಿ ಪ್ರಸಿದ್ಧಿ ಪಡೆಯಿತು.





ಯುದ್ಧದಲ್ಲಿ ಮೊದಲು ಹೇಮುವಿನ ಬಲವಾದ ಸೈನ್ಯದ ಏಟಿಗೆ, ಯುದ್ಧ ವ್ಯೂಹಗಳಿಗೆ ಅಕ್ಬರನ ಸೈನ್ಯವು ತಡೆಯಲಾಗದೆ ಹೋಯಿತು. ಅಕ್ಬರನ ಪರಿಸ್ಥಿತಿ ಸೋಲಿನ ಅಂಚಿಗೇ ಬಂದಿತು. ಆದರೂ ಅಕ್ಬರನ ಅದೃಷ್ಟದಿಂದ, ಯಾರದೋ ಬಾಣದ ಪೆಟ್ಟಿನಿಂದ ಹೇಮು ಕುದುರೆಯಿಂದ ಕೆಳಗೆ ಬೀಳುವುದನ್ನು ನೋಡಿ ಅವನ ಸೈನಿಕರು ಭಯ ಭ್ರಾಂತರಾದರು. ಆ ಕಾರಣದಿಂದಲೇ ಅಕ್ಬರನಿಗೇ ವಿಜಯವಾಯಿತು.



ಭಟರು ಹೇಮುವನ್ನು ಬಂಧಿಸಿ ತಂದು ಅಕ್ಬರನ ಮುಂದೆ ನಿಲ್ಲಿಸಿದರು. ಶತ್ರುಶೇಷವನ್ನು ಉಳಿಸ ಕೂಡದು. ಅವನನ್ನು ಕೊಲ್ಲಿಸಬೇಕೆಂದು ಭೈರಂಖಾನ್ ಸಲಹೆ ಮಾಡಿದನು. ಆದರೆ ನಿಸ್ಸಹಾಯಕನಾಗಿದ್ದ ಬಂದಿಯನ್ನು ಕೊಲ್ಲಲು ಅಕ್ಬರನು ನಿರಾಕರಿಸಿದುದರಿಂದ, ಭೈರಂಖಾನ್ ತಾನೇ ಹೇಮುವಿನ ತಲೆಯನ್ನು ಕಡಿದು ಹಾಕಿದನು.

ಪರಸ್ಪರ ವಿರುದ್ಧ ಸ್ವಭಾವದ ಅಕ್ಬರ್ ಭೈರಂಖಾನರ ಮಧ್ಯೆ ಅಭಿಪ್ರಾಯಭೇದಗಳೂ, ಅನುಮಾನಗಳೂ ತಲೆ ಎತ್ತಿದುವು. ಅಕ್ಬರನ ಮೇಲೆ ಅಧಿಕಾರ ಚಲಾಯಿಸಲಿಕ್ಕೆ ಭೈರಂಖಾನ್ ಪ್ರಯತ್ನಿಸುತ್ತಿದ್ದನು. ಆ ಸಂಗತಿಯನ್ನು ಕಂಡು ಹಿಡಿದ ಅಕ್ಬರ್ ಆತನನ್ನು ಪಠಾತ್ತನೆ ಅಧಿಕಾರದಿಂದ ಕಿತ್ತು ಬಿಟ್ಟನು. ಭೈರಂಖಾನ್ ಇದಿರು ತಿರುಗಿ ಸಿಕ್ಕಿಬಿದ್ದು, ಮಕ್ಕಾ ಯಾತ್ರೆಗೆ ಹೋಗಲು ಅಕ್ಬರನ ಅನುಮತಿ ಪಡೆದನು.





ಭೈರಂಖಾನನಿಗೆ ಅನೇಕ ಮಂದಿ ಶತ್ರುಗಳಿದ್ದರು. ಅಫ್‌ಘನ್‌ಸ್ಥಾನಕ್ಕೆ ಸೇರಿದ ಶತ್ರುವೊಬ್ಬನು ಭೈರಂಖಾನ್ ಮಕ್ಕಾಕ್ಕೆ ಹೋಗುವ ಸಂಗತಿಯನ್ನು ತಿಳಿದು, ಮಾರ್ಗ ಮಧ್ಯದಲ್ಲಿ ಹೊಂಚಿ ಕೊಂಡಿದ್ದು, ಕತ್ತಿಯಿಂದ ತಿವಿದು ಅವನನ್ನು ಕೊಂದು ಬಿಟ್ಟನು.

ಎರಡನೇ ಪಾನಿಪಟ್ ಯುದ್ಧದಲ್ಲಿ ವಿಜಯ ಸಾಧಿಸಿದುದರಿಂದ ಅಕ್ಬರನಿಗೆ ದೊಡ್ಡ ಹೆಸರು ಬಂದಿತು. ಆದರೂ ಅಕ್ಬರ್ ವಿಜಯಗರ್ವದಿಂದ ಉಬ್ಬಿಹೋಗದೆ, ಪರಾಕ್ರಮಶಾಲಿಗಳಾದ ರಾಜಪುತ್ರ ರಾಜರೊಂದಿಗೆ ಸ್ನೇಹ ಸಂಬಂಧವನ್ನು ಬಲಪಡಿಸಿಕೊಳ್ಳಲು ಪ್ರಯತ್ನ ಮಾಡಿದನು. ಜೈಪೂರ್ ರಾಜನಾದ ಬಿಹಾರಿಮಲ್ಲನ ಕುಮಾರಿಯನ್ನು ವಿವಾಹ ಕೂಡಾ ಮಾಡಿಕೊಂಡನು.





ಆ ಮೇಲೆ ಅಕ್ಬರ್ ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಕಾರ್ಯಕ್ಕೆ ತೊಡಗಿದನು. ಅಕ್ಬರನ ದೃಷ್ಟಿ ರಾಣಿ ದುರ್ಗಾವತಿ ಪಾಲಿಸುತ್ತಿದ್ದ ಗೊಂಡ್ವಾನಾ ರಾಜ್ಯದ ಕಡೆಗೆ ತಿರುಗಿತು. ಗಂಡನು ತೀರಿಹೋದ ಮೇಲೆ ಚಿಕ್ಕವನಾದ ತನ್ನ ಕುಮಾರ ವೀರನಾರಾಯಣನ ಪರವಾಗಿ ರಾಣಿ ದುರ್ಗಾವತಿ ರಾಜ್ಯ ಪಾಲನೆ ಮಾಡುತ್ತಿದ್ದಳು.

ಗೊಂಡ್ವಾನಾವನ್ನು ಜಯಿಸಲು ಅಕ್ಬರನು ಅಸಫ್ ಖಾನ್ ಎಂಬ ಸೇನಾನಾಯಕನನ್ನು ಕಳುಹಿಸಿದನು. ಅವನು ಆಕಸ್ಮಿಕವಾಗಿ ದಾಳಿ ಮಾಡಿದುದರಿಂದ ರಾಣಿ ದುರ್ಗಾವತಿ ಯುದ್ಧಕ್ಕೆ ಸಿದ್ಧವಾಗಿಲ್ಲದಿದ್ದರೂ, ಅವಳ ಸೈನಿಕರು ಅಕ್ಬರನ ಸೇನೆಯನ್ನು ಧೈರ್ಯದಿಂದ ಇದಿರಿಸಿದರು.





ಆಗ ರಾಣಿ ದುರ್ಗಾವತಿ ತನ್ನ ಸೇನೆಗೆ ತಾನೇ ನಾಯಕತ್ವ ವಹಿಸಿ, ತನ್ನ ರಾಜ್ಯದ ಮೇಲೆ ದುರಾಕ್ರಮಣ ಮಾಡಿದ ಐವತ್ತು ಸಾವಿರ ಮಂದಿ ಸೈನಿಕರನ್ನು ಇದಿರಿಸಿದಳು. ಯುವರಾಜ ವೀರನಾರಾಯಣನೂ ಯುದ್ಧರಂಗಕ್ಕೆ ಇಳಿದನು. ಯುವರಾಜರನ್ನು ಹೇಗಾದರೂ ಹಿಡಿಯಬೇಕೆಂದು ಅಸಫ್‌ಖಾನ್ ವ್ಯೂಹ ಮಾಡಿದನು.

ಬಾಣದ ಏಟುತಿಂದ ವೀರನಾರಾಯಣನನ್ನು ಅಸಫ್‌ಖಾನನ ಸೈನಿಕರು ಮುತ್ತಿಕೊಂಡರು. ಈ ವಿಷಯ ತಿಳಿದು ರಾಣಿ ದುರ್ಗಾವತಿ, ಕೂಡಲೇ ಅಲ್ಲಿಗೆ ಹೋಗಿ, ಆ ಸೈನಿಕರೊಂದಿಗೆ ಹೋರಾಡಿ, ಕುಮಾರನನ್ನು ಬಿಡುಗಡೆ ಮಾಡಿ ರಾಜಭವನಕ್ಕೆ ಕಳುಹಿಸಿದಳು. ಅವನ ರಕ್ಷಣೆಗಾಗಿ ಅರ್ಧಮಂದಿ ಸೈನಿಕರು ಹೋದುದರಿಂದ ಅವಳ ಪಕ್ಷಬಲಹೀನವಾಯಿತು. ಇನ್ನು ಸೋಲು ತಪ್ಪದೆಂದು ನಿರ್ಧರಿಸಿ ದುರ್ಗಾವತಿ ಕತ್ತಿಯಿಂದ ತಿವಿದುಕೊಂಡು ಪ್ರಾಣ ಬಿಟ್ಟಳು.





ರಾಣಿ ದುರ್ಗಾವತಿಯು ಮರಣವಾದ ಮೇಲೆ ಯುವರಾಜ ವೀರನಾರಾಯಣನೇ ಸೇನಾನಾಯಕತ್ವ ವಹಿಸಿದನು. ಅಕ್ಬರನ ಸೇನೆ ಸಂಖ್ಯಾಬಲದಲ್ಲಿ ಬಹಳ ಹೆಚ್ಚೆಂದು ತಿಳಿದುಕೂಡಾ ವೀರನಾರಾಯಣನು ತನ್ನ ದೇಹದಲ್ಲಿ ಶ್ವಾಸವಿರುವವರೆಗೂ ಹೋರಾಡಿ, ವೀರಮರಣವನ್ನಪ್ಪಿದನು.



# ಕಷ್ಟಾರ್ಜಿತ

ಕಾಟ್ರಕೋಟವೆಂಬ ಒಂದು ಗ್ರಾಮದಲ್ಲಿ ಕಾಳಪ್ಪ ನೆಂಬ ಕಷ್ಟಜೀವಿಯಾದ ಕಮ್ಮಾರನಿದ್ದನು. ಅವನು ಕುಲುಮೆಯ ಮುಂದೆ ಕಾಯಿಸಿ ಕಾಯಿಸಿ ಕಬ್ಬಿಣವನ್ನು ಹದಕ್ಕೆ ತಂದು ಕತ್ತಿ, ಕೊಡಲಿ, ಗುದ್ದಲಿ, ಹಾರೆ ಮೊದಲಾದ ವ್ಯವಸಾಯಕ್ಕೆ ಅಗತ್ಯವಾದ ಸಾಧನ ಗಳನ್ನು ಮಾಡಿ ಮಾರುವ ಅಂಗಡಿಯನ್ನು ಇಟ್ಟು ಕೊಂಡಿದ್ದನು.

ಹೇಗೆಹೇಗೋ ಇರುವ ಕಬ್ಬಿಣದ ಮೊದ್ದುಗಳಿಂದ ಬೇಕಾದ ಆಯುಧಗಳನ್ನು ತಯಾರಿಸುವುದು ಸುಲಭವೇನಲ್ಲ. ಕೆಂಡದ ಕುಲುಮೆಗೆ ಗಳಿಗೆಗೊಮ್ಮೆ ತಿದಿಯೊತ್ತಿ ಗಾಳಿಯೂದ ಬೇಕು. ಕಬ್ಬಿಣವನ್ನು ಕೆಂಪಗೆ ಕಾಯಿಸಬೇಕು. ಕಾದ ಕಬ್ಬಿಣ ಆರಿಹೋಗು ವುದರೊಳಗೆ ಚಮ್ಮಟಿಗೆಯಿಂದ ಹೊಡೆದು ಹದಕ್ಕೆ ತರಬೇಕು. ಹಾಗೆ ಹೊಡೆಯಬೇಕಾದರೆ ಒಳ್ಳೆಯ ತೋಳ್ಬಲವೂ ಬೇಕು. ಕಾಳಪ್ಪನಿಗೆ ತೋಳ್ಬಲ ಚೆನ್ನಾಗಿತ್ತು. ಬೆವರು ಸುರಿಸಿ ಹಣ ಸಂಪಾದನೆ ಮಾಡಬೇಕೆಂಬುದರಲ್ಲಿ ಆಸಕ್ತಿಯೂ ಚೆನ್ನಾಗಿತ್ತು. ಇವೆಲ್ಲಕ್ಕೂ ಮೂಲವಾದ ಆರೋಗ್ಯವೂ ಹಸಿವೆಯೂ ಅವನಿಗಿತ್ತು.

ಕಾಳಪ್ಪನ ಮಗನಾದ ಸೋಮಪ್ಪನು ಕೇವಲ ಕೋಳಪ್ಪನಾಗಿ ಸೋಮಾರಿ ಕೋಣದಂತೆ ಬೆಳೆಯು ತ್ತಿದ್ದನು. ಇದಕ್ಕೆ ಕಾರಣ ಅವನ ತಾಯಿ ಶೇಷಮ್ಮಳೇ. ಶೇಷಮ್ಮಳಿಗೆ ಮಗನನ್ನು ಕುಲುಮೆಯ ಬಿಸಿಯ ಮುಂದೆ ಕುಳ್ಳಿರಿಸಿ ಕಷ್ಟಪಡಿಸಲು ಇಷ್ಟವಿರಲಿಲ್ಲ. ಸೋದರ ಮಾವನ ಹಾಗೆಯೇ ತನ್ನ ಕುಮಾರನು ಕೂಡಾ ಏನಾದರೊಂದು ಉದ್ಯೋಗ ಮಾಡಿ ಬದುಕ ಬೇಕೇ ಹೊರತು, ಬೆಂಕಿಯ ಹತ್ತಿರ ಹೋಗಲೇ ಬಾರದೆಂಬುದು ಅವಳ ಉದ್ದೇಶ. ಅದಕ್ಕಾಗಿ ಅವಳು ಹಲಗೆ ಬಳಪಗಳನ್ನು ಕೊಂಡುತಂದು ಮಗನ ಕೈಗೆ ಕೊಟ್ಟು, ಶಾಲೆಗೆ ಕಳುಹಿಸಿದಳು.

ಕಾಳಪ್ಪನಿಗೆ ಮಗನು ಶಾಲೆಗೆ ಹೋಗುವುದು ಹಿಡಿಸಿದರೂ ಕುಲವೃತ್ತಿಯ ಅಭ್ಯಾಸದಲ್ಲಿ ಪಳಗಲೇ ಬೇಕೆಂದಿತ್ತು. ತನ್ನೊಂದಿಗೆ ಅದಕ್ಕೆ ಅಂತ್ಯ ಬರುವುದು ತನ್ನ ಮನೆಗೂ ಒಳ್ಳೆಯದಲ್ಲ ಎಂದುಕೊಳ್ಳುತ್ತಿದ್ದನು. ಆದರೆ ಹೆಂಡತಿಯ ಮಾತೇ ಗೆಲ್ಲುತ್ತಿತ್ತು. ಅವಳನ್ನು ಮೀರಿ ನಡೆಸಲು ಕಾಳಪ್ಪನಿಂದಾಗಲಿಲ್ಲ.

ಸೋಮಾರಿ ಸೋಮಪ್ಪನು ಶಾಲೆಗೆ ಹೋಗಿ ಬರು ತ್ತಿದ್ದರೂ ಓದು ಬರೆಹ ಅವನಿಗೇನೂ ಹತ್ತಿಕೊಳ್ಳಲಿಲ್ಲ.

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ




“ಹೋಗಲಿ ಬಿಡು. ಕುಲುಮೆಗೆ ತಿದಿಯನ್ನಾದರೂ ಒತ್ತಿಕೊಂಡು ಕುಳಿತುಕೋ ಮಗನೇ” ಎಂದು ಕಾಳಪ್ಪನು ಹೇಳುತ್ತಿದ್ದನು. ಆದರೆ ಅವನಿಗೆ ಕುಳಿತು ತೂಕಡಿಸುತ್ತಾ ಗಾಳಿಯೊತ್ತುವುದಕ್ಕಿಂತ, ಬೀದಿಯಲ್ಲಿ ತಿರುಗುವುದೇ ಚೆನ್ನಾಗಿರುವುದೆಂದು ಕಂಡು, ಸೋಮಪ್ಪನು ತಂದೆಯ ಕಣ್ಣಿಗೆ ಬೀಳುವುದನ್ನೇ ಬಿಟ್ಟನು. ಹಸಿವಾದಾಗ ಬೆಕ್ಕಿನಂತೆ ಬಂದು ಊಟ ಮಾಡಿ ಹೋಗಿಬಿಡುತ್ತಿದ್ದನು.

ಅಂತೂ ಕ್ರಮವಾಗಿ ಸೋಮಪ್ಪನು ಬೆಳೆಯುತ್ತಾ ದೊಡ್ಡವನಾಗುತ್ತಿದ್ದನು. ಅವನ ಶರೀರದಲ್ಲಿ ತಾರುಣ್ಯದ ಜೀವ ಸತ್ವಗಳು ಚಿಗುರತೊಡಗಿದುವು. ಆ ಸಮಯದಲ್ಲಿ ಕಾಳಪ್ಪನು ವೃದ್ಧಾಪ್ಯದ ಬಾಗಿಲನ್ನು ಹೊಕ್ಕನು. ತನ್ನ ಶಕ್ತಿ ಕಡಿಮೆಯಾಗುವುದನ್ನು ಅರಿತನು. ಅನಂತರ ತನ್ನ ಕಮ್ಮಾರ ಕೊಟ್ಟಿಗೆ ಅಂಗಡಿ ಮುಚ್ಚಬೇಕಾದುದೇನಾ? ಎಂಬ ಚಿಂತೆ ಅವನಿಗೆ ಒಡಿಯಿತು. ತಾನು ಸಂಪಾದಿಸಿಟ್ಟಿದ್ದನ್ನು ಮಗನು ಮೂರು ಹೊತ್ತಿನೊಳಗೆ ತಿಂದು ತೀರಿಸಿ ಬಿಡುತ್ತಾನೆ. ತರುವಾಯ ಅವನೊಂದಿಗೆ ತಾನೂ, ತನ್ನ ಹೆಂಡತಿಯೂ ಬಿಕ್ಕೆ ಬೇಡಿ ಬದುಕಬೇಕಾಗುತ್ತದೆ. ಅದಕ್ಕಿಂತ ಹೆಚ್ಚಿನ ಹೀನತ್ವ ಉಂಟೆ? ಎಂದು ದಿಗಿಲುಗೊಂಡನು.

ಹೆಂಡತಿಯನ್ನು ಕರೆದು ತನ್ನ ಚಿಂತೆಯನ್ನು ಹೇಳಿ “ನಮ್ಮವನನ್ನು ಯಾಕೂ ಆಗದಂತೆ ಕೆಡಿಸಿ ಹಾಕಿದಿ. ಈಗಾದರೂ ಬುದ್ಧಿ ತಂದುಕೊಂಡು ಕುಲವೃತ್ತಿ ಹಿಡಿಯಲಿಕ್ಕೆ ಹೇಳು” ಎಂದು ಹೇಳಿ ನೋಡಿದನು.

“ನಿಮಗೆ ಎಲ್ಲದಕ್ಕೂ ಅವಸರ. ಅವನು ಈಗಷ್ಟೇ ಬೆಳೆಯುತ್ತಾನೆ. ಸುಮ್ಮನೆ ತಿರುಗುವುದಿಲ್ಲ. ಏನೋ ಉದ್ಯೋಗ ಹುಡುಕುತ್ತಲೇ ಇದ್ದಾನೆ” ಎಂದಳು ಶೇಷಮ್ಮ ಮಗನ ಮೇಲಿನ ಮಮಕಾರದಿಂದ.

ಕಾಳಪ್ಪನಿಗೆ ಮೈ ಉರಿಯಿತು. “ಉದ್ಯೋಗವೇ! ಅವನಿಗೂ ನಿನಗೂ ಕಷ್ಟಾರ್ಜಿತವೆಂದರೆ ಏನೆಂದಾದರೂ ಗೊತ್ತಿದೆಯೇ? ನಾನು ಸಂಪಾದಿಸಿಟ್ಟುದನ್ನು ತಿಂದು ಕುಣಿಯಬಹುದೆಂದುಕೊಂಡಿದ್ದಾನೇನು? ನನ್ನ ಸಂಪಾದನೆಯಲ್ಲಿ ಚಿಕ್ಕಾಸು ಕೂಡಾ ಅವನಿಗೆ ಕೊಡಲಾರೆನು. ಏನೆಂದುಕೊಂಡಿದ್ದಾನಂತೆ? ನಾನು ಕೆಲಸ ಕಲಿತಂದಿನಿಂದ ದಿನಕ್ಕೆ ಐದು ರೂಪಾಯಿಯಾದರೂ ನೋಡದೆ ಅಂಗಡಿ ಮುಚ್ಚಿರಲಿಲ್ಲ. ಇವನು ಎಂಥದೋ ಕೆಲಸ ಮಾಡಿ ಮೂರು ರೂಪಾಯಿ ಬೇಡ, ಮೂರು ಪಾವಲಿ ಸಂಪಾದಿಸಿ ತರಲಿ ನೋಡುವಾ” ಎಂದನು ಆವೇಶದಿಂದ.

ಆಗಲೇ ಮನೆಗೆ ಬಂದ ಸೋಮಪ್ಪನನ್ನು ನೋಡಿ ಶೇಷಮ್ಮ, “ಏನೋ ಸೋಮೂ, ನಿನ್ನನ್ನು ಶುದ್ಧ ಶುಂಠನ ಲೆಕ್ಕಕ್ಕೆ ಕಟ್ಟಿ ಬಿಟ್ಟಿದ್ದಾರಪ್ಪಾ. ಮೂರು ಪಾವಲಿ ಕೂಡಾ ಸಂಪಾದಿಸಲು ನಿನ್ನಿಂದಾಗದಂತೆ” ಎಂದಳು.

“ಅದೇನು ಬಿಡಮ್ಮಾ ನಿಮಿಷದಲ್ಲಿ ಸಂಪಾದಿಸಿಕೊಂಡು ತರುತ್ತೇನೆ ನೋಡು” ಎಂದನು ಸೋಮಪ್ಪ.



ಕೂಡಲೇ ಸೋಮಪ್ಪನು ರೋಷದಿಂದ ಹೊರಟು ಹೋದನು. ಪಾವಲಿಗಳು ಯಾವ ಮರದಲ್ಲಾದರೂ ಆಗುತ್ತವೇನು ? ಹೀಗೆ ಹೋಗಿ ಹಾಗೆ ಕಿತ್ತುಕೊಂಡು ಬರಲು ಸಾಧ್ಯವೇ ? ಮೂರು ಗಂಟೆಗಳ ವರೆಗೆ ಅಲ್ಲಿ ಇಲ್ಲಿ ತಿರುಗಾಡಿ ಬಂದು, "ಅಮ್ಮಾ, ಬಿಸಿಲಿನಲ್ಲಿ ತಿರುಗಿ ತಿರುಗಿ ತಲೆ ಚುಂ ಚುಂ ನೋಯುತ್ತಾ ಇದೆ" ಎಂದನು.

"ಏನಾದರೂ ಸಂಪಾದಿಸಿ ತಂದೆಯೇನೋ ಮಗಾ ?" ಎಂದ ಕೇಳಿದಳು ಶೇಷಮ್ಮ.

"ಇಲ್ಲ, ಊಟ ಮಾಡಿ ಮತ್ತೆ ಹೋಗುತ್ತೇನೆ" ಎಂದನು ಸೋಮಪ್ಪ.

ಸೋಮಪ್ಪ ಊಟ ಮಾಡಿ ಮಲಗಿದವನು ಸಾಯಂಕಾಲದ ವರೆಗೂ ಏಳಲಿಲ್ಲ. ತಂದೆ ಅಂಗಡಿಯಿಂದ ಬಂದು, "ಎಲ್ಲಿಯೋ ನಿನ್ನ ಸಂಪಾದನೆಯ ಮೂರು ಪಾವಲಿ ? ಎಂದು ಕೇಳಿದರೆ ಏನು ಹೇಳಲಿ ? ಎಂಬ ಆಲೋಚನೆ ಅವನನ್ನು ತಟಕ್ಕನೆ ಎಬ್ಬಿಸಿತು. "ಅಮ್ಮಾ, ನಾಳೆ ಖಂಡಿತ ಸಂಪಾದಿಸಿ ತರುತ್ತೇನೆ. ಈ ದಿನ ಮೂರು ಪಾವಲಿ ನೀನೇ ಅಪ್ಪನಿಗೆ ಕೊಟ್ಟುಬಿಡು" ಎಂದು ಅಂಗಲಾಚಿದನು.

ತಂದೆಯ ಮುಂದೆ ಮಗನು ನಗೆಗೀಡಾಗುವುದನ್ನು ಸಹಿಸದ ತಾಯಿ, ತನ್ನ ಪೆಟ್ಟಿಗೆಯಿಂದ ಮೂರು ಪಾವಲಿಗಳನ್ನು ತಂದು ಮಗನ ಕೈಗೆ ಕೊಟ್ಟಳು.

ಕಾಳಪ್ಪನು ಕತ್ತಲೆಯಾಗುವ ವರೆಗೂ ಅಂಗಡಿ ಕೊಟ್ಟಿಗೆಯಲ್ಲಿ ಕೆಲಸ ಮಾಡಿ ಮನೆಗೆ ಬಂದನು. ಸೋಮಪ್ಪನು ಹೆಮ್ಮೆಯಿಂದ ತನ್ನ ಜೇಬಿನೊಳಗಿದ್ದ ಮೂರು ಪಾವಲಿಗಳನ್ನು ತಂದೆಯ ಕೈಗೆ ಹಾಕಿ, "ನೋಡಪ್ಪ" ಎಂದನು.

ಕಾಳಪ್ಪನು ಆ ಮೂರು ಪಾವಲಿಗಳನ್ನು ಹಾಗೆ ಹೀಗೆ ತಿರುಗಿಸಿ ನೋಡಿ, "ಹೇಗೆ ಸಂಪಾದಿಸಿದೆಯೋ?" ಎಂದು ಕೇಳಿದನು.

"ಹೇಗೆಂದರೇನಪ್ಪಾ ? ಸಾಯಂಕಾಲದ ವರೆಗೆ ಗಾಣದೆತ್ತಿನ ಹಾಗೆ ದುಡಿದು ಸಂಪಾದಿಸಿದ್ದು" ಎಂದನು ಸೋಮಪ್ಪ.

"ಇದು ನಿನ್ನ ಕಷ್ಟಾರ್ಜಿತವೇ ? ಅಲ್ಲ !" ಎಂದು ಹೇಳಿ ಆ ಪಾವಲಿಗಳನ್ನು ಉರಿಯುವ ಒಲೆಯೊಳಗೆ ಎಸೆದು ಬಿಟ್ಟನು ಕಾಳಪ್ಪ.

ಮರುದಿನ ಶೇಷಮ್ಮ ಸೋಮಪ್ಪನೊಂದಿಗೆ "ಇವತ್ತಾದರೂ ಸಂಪಾದಿಸಿ ತಂದುಬಿಡಪ್ಪಾ" ಎಂದಳು. ಆ ದಿನ ಅವನು ತಾಯಿಗೆ ಗೊತ್ತಾಗದ ಹಾಗೆ ಅವಳ ಪೆಟ್ಟಿಗೆಯಿಂದ ಒಂದು ರೂಪಾಯಿ ತೆಗೆದುಕೊಂಡು ಹೋಗಿ, ಮಿಠಾಯಿಯ ಅಂಗಡಿಯಲ್ಲಿ ಚಿಲ್ಲರೆ ಮಾಡಿಸಿದನು. ಒಂದು ಪಾವಲಿಗೆ ಪಕೋಡಾ ಹುರಿಗಡಲೆ ಕೊಂಡುಕೊಂಡು ತಿಂದನು. ಉಳಿದ ಮೂರು ಪಾವಲಿಗಳನ್ನು ಮನೆಗೆ ತಂದು ತನ್ನ ಸಂಪಾದನೆ ಎಂದು ಹೇಳಿ ಅವುಗಳನ್ನು ತಂದೆಯ ಕೈಗೆ ಕೊಟ್ಟನು. ಮೊದಲನೇ ದಿನದ ಹಾಗೆಯೇ ತಂದೆ ಆ ಮೂರು ಪಾವಲಿಗಳನ್ನು ಹಾಗೆ ಹೀಗೆ

ನೋಡಿ "ಇದೂ ನಿನ್ನ ಕಷ್ಟಾರ್ಜಿತವೇನಲ್ಲ. ನನ್ನನ್ನು ಮೋಸಪಡಿಸುವಿಯಾ ?" ಎಂದು ಹೇಳಿ ಅವುಗಳನ್ನು ಕೂಡಾ ಒಲೆಯೊಳಗೆ ಬಿಸುಟನು.

ಮೂರನೇ ದಿನ ಸೋಮಪ್ಪನಿಗೆ ತಾಯಿಯ ಪೆಟ್ಟಿಗೆಯಲ್ಲಿ ಏನೂ ಸಿಗಲಿಲ್ಲ. ಅದೂ ಅಲ್ಲದೆ ತಾನು ಕೊಡುವುದು ಕಷ್ಟಾರ್ಜಿತದ ದುಡ್ಡಲ್ಲವೆಂದು ಅಪ್ಪನಿಗೆ ಹೇಗೋ ತಿಳಿದುಬಿಡುತ್ತದೆ. ಆದುದರಿಂದ ನಿಜವಾಗಿಯೇ ಸಂಪಾದಿಸಿ ತರಬೇಕೆಂದು ಹಟಕ್ಕೆ ಬಂದನು. ಆ ಕಾಟ್ರಕೋಟೆ ಗ್ರಾಮದಲ್ಲಿ ಶನಿವಾರ ಸಂತೆ ಕೂಡುತ್ತಿತ್ತು. ಅಲ್ಲಿ ಹೋಗಿ ಗಂಟುಮೂಟೆ ಹೊತ್ತು ಹಾಕಿ ಕೂಲಿ ಕೆಲಸಕ್ಕೆ ತಲೆ ಕೊಟ್ಟನು. ಕತ್ತಲೆ ಬೀಳುವ ವರೆಗೆ ದುಡಿದರೂ ಹಸಿವೆಯ ಬೆಂಕಿಗೆ ಉರುವಲು ಹಾಕಲಿಕ್ಕೆ ಸರಿ ಹೋಯಿತಲ್ಲದೆ ಪಾವಲಿ ಕೂಡಾ ಉಳಿಯಲಿಲ್ಲ. ಮರುದಿನ ಹೊರಗಿನ ಊರುಗಳಿಂದ ಬರುವ ಗಾಡಿಗಳ ತಾಣಕ್ಕೆ ಹೋದನು. ಅಲ್ಲಿ ಮೂಟೆ ಹೊತ್ತು ಸಂಪಾದಿಸ ತೊಡಗಿದನು. ಮೈಕಟ್ಟಿನಲ್ಲಿ ಬಲಿಷ್ಠನಾಗಿದ್ದರೂ ಶ್ರಮಪಟ್ಟು ಅಭ್ಯಾಸವಿಲ್ಲದವನಾದುದರಿಂದ ಪೆಟ್ಟಿಗೆಗಳನ್ನು ಹೊರುವುದು ಕಷ್ಟವೇ ಅನಿಸಿತು. ಆದರೂ ಹಟ ಹಿಡಿದು ಕೆಲಸ ಮಾಡಿದನು. ಹಸಿವೆ ಜಾಸ್ತಿಯಾದುದರಿಂದ ಅವನು ಹೊಟ್ಟೆ ತುಂಬಿಕೊಂಡ ಮೇಲೆ ಪಾವಲಿ ಮಾತ್ರ ಉಳಿಯಿತು. ಹೀಗೇ ಮೂರು ದಿನ ಕಷ್ಟಪಟ್ಟು ಮೂರು ಪಾವಲಿ ಉಳಿಸಿಕೊಂಡನು. ಆ ಮೂರು ಪಾವಲಿಗಳನ್ನು ತಂದು ತಂದೆಯ ಕೈಗೆ ಕೊಟ್ಟು, ಉಸಿರು ಬಿಟ್ಟನು. ಕಾಳಪ್ಪ ಎಂದಿನಂತೆ ಇದೂ ಕೂಡಾ ನಿನ್ನ ಕಷ್ಟಾರ್ಜಿತವೇನಲ್ಲವೆಂದು ಒಲೆಯೊಳಗೆ ಬಿಸುಟು ಬಿಟ್ಟನು.

ಈ ಸಾರಿ ಸೋಮಪ್ಪ ಮೊದಲಿನ ಹಾಗೆ ನೋಡುತ್ತಾ ಸುಮ್ಮನಿರದೆ, ಓಡಿ ಹೋಗಿ ಒಲೆಯೊಳಗಿದ್ದ ಪಾವಲಿಗಳನ್ನು ಕೆದರಿ ಎಳೆದು ಎತ್ತಿಕೊಂಡನು.

ಅದನ್ನು ನೋಡಿ ಕಾಳಪ್ಪ ಮುಗುಳು ನಗುತ್ತ, "ಮಗನೇ, ಇದು ನಿನ್ನ ಕಷ್ಟಾರ್ಜಿತ ನಿಜವೇ. ಈ ಮೊದಲು ನೀನು ಎರಡು ಸಾರಿ ತಂದುಕೊಟ್ಟ ದುಡ್ಡನ್ನು ಒಲೆಗೆ ಬಿಸಾಡಿದರೆ ನಿನಗೆ ಸ್ವಲ್ಪವೂ ಕಷ್ಟವಾಗಲಿಲ್ಲ. ಏಕೆ ? ಅದು ನಿನ್ನ ಕಷ್ಟಾರ್ಜಿತವಲ್ಲದ್ದರಿಂದಲೇ. ಕಷ್ಟಾರ್ಜಿತವಾದ ಹಣದ ಮೇಲೆ ಹೀಗೆಯೇ ಮಮಕಾರವಿರುತ್ತದೆ. ಯಾರೋ ಸಂಪಾದಿಸಿಕೊಟ್ಟರೆ ಅದರ ಬೆಲೆ ತಿಳಿಯದು. ಆದುದರಿಂದ ಯಾರಿಗೆ ಅವರೇ ಕಷ್ಟಪಟ್ಟು ಸಂಪಾದಿಸಿದ್ದೇ ನಿಜವಾದ ಧನ" ಎಂದನು.

"ನಿಜವೇ ಅಪ್ಪಾ" ಎಂದು ಸೋಮಪ್ಪನು ಅಂದಿನಿಂದ ತಂದೆಗೆ ಸಂತೋಷವಾಗುವ ಹಾಗೆ ದುಡಿಯುತ್ತ, ಮುಂದೆ ಮುಂದೆ ಸಮರ್ಥನೆನಿಸಿದನು.





# ಪಂಡಿತನ ಸ್ವಾರ್ಥ

ಹಿಂದೆ ಮರಾಳ ದೇಶವನ್ನು ಪುಷ್ಪಕಾಂತನೆಂಬ ರಾಜನು ಪಾಲಿಸಿಕೊಂಡಿದ್ದ ಕಾಲದಲ್ಲಿ ಅವನ ಆಸ್ಥಾನದಲ್ಲಿ ಮುಚುಕುಂದನೆಂಬೊಬ್ಬ ಪಂಡಿತನಿದ್ದನು. ಅವನು ಮಹಾ ಸ್ವಾರ್ಥಿಯಾಗಿಯೂ, ದೊಡ್ಡ ಅಹಂಕಾರಿಯಾಗಿಯೂ ಇದ್ದನು. ಯಾರಾದರೂ ರಾಜನನ್ನು ನೋಡಬೇಕಾದರೆ ಮೊದಲು ಅವನನ್ನು ದರ್ಶಿಸಿ ತಮ್ಮ ಶ್ಲಾಘನೆಗಳಿಂದ, ಸೇವೆಗಳಿಂದ ಅವನನ್ನು ಸಂತೋಷಪಡಿಸಿ ಮೆಚ್ಚಿಸಿದವರಿಗಷ್ಟೇ ಆಸ್ಥಾನದೊಳಗೆ ಪ್ರವೇಶಿಸಲು ಸಾಧ್ಯ. ಈ ಕಾರಣದಿಂದ ಅನೇಕ ಮಂದಿ ಸಮರ್ಥರಾದ ಪಂಡಿತರೂ, ಜ್ಞಾನಿಗಳೂ ರಾಜಾಶ್ರಯವನ್ನು ದೊರಕಿಸಿಕೊಳ್ಳಲಾಗದೆ, ಬೇರೆ ಉಪಾಯವಿಲ್ಲದೆ ಪರದೇಶಗಳಿಗೆ ವಲಸೆ ಹೋಗುತ್ತಿದ್ದರು.

ಇಂತಹ ಪರಿಸ್ಥಿತಿಯಲ್ಲಿ ಕೃಷ್ಣಕಾಂತನೆಂಬ ಯುವಕನು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿ, ಮಹಾ ವಿದ್ವಾಂಸನಾಗಿ ರಾಜನನ್ನು ಆಶ್ರಯಿಸಲು ಬಂದನು. ಬಂದವನಿಗೆ ಆಸ್ಥಾನದ ಸ್ಥಿತಿಗತಿಗಳೆಲ್ಲ ಗೊತ್ತಾಯಿತು. ಮುಚುಕುಂದನ ಸ್ವಾರ್ಥದ ಪ್ರಭಾವವು ಚೆನ್ನಾಗಿ ಅರ್ಥವಾಯಿತು.

ಕೃಷ್ಣಕಾಂತನು ತನ್ನ ಒಬ್ಬ ಬಂಧುವಿನ ಮೂಲಕವಾಗಿ, ರಾಜನರ್ತಕಿಯಾದ ಮಂದಾರಮಾಲೆಯ ಪರಿಚಯ ಮಾಡಿಕೊಂಡನು.

ಅವಳು ಕೃಷ್ಣಕಾಂತನ ಪಾಂಡಿತ್ಯವನ್ನು ನೋಡಿ, ಮುಗ್ಧಳಾಗಿ, ಅವನಿಗೆ ತಾನು ಅಗತ್ಯವಾಗಿ ರಾಜನ ದರ್ಶನ ಆಗುವ ಹಾಗೆ ಮಾಡುವೆನೆಂದು ಮಾತುಕೊಟ್ಟಳು.

ಒಂದು ದಿನ ಮಂದಾರಮಾಲೆ ನಾಟ್ಯ ಪ್ರದರ್ಶನಕ್ಕಾಗಿ ಆಸ್ಥಾನಕ್ಕೆ ಹೋಗುವಾಗ, ಕೃಷ್ಣಕಾಂತನನ್ನು ತನ್ನೊಂದಿಗೆ ಕರೆದುಕೊಂಡು ಹೋದಳು. ರಾಜನರ್ತಕಿಯ ಜತೆಯಲ್ಲೇ ಅವನಿದ್ದುದರಿಂದ ದ್ವಾರಪಾಲಕರಾರೂ ಅವನನ್ನು ತಡೆಯಲಿಲ್ಲ.

ಅವಳು ತನ್ನ ನಾಟ್ಯ ಪ್ರದರ್ಶನವೆಲ್ಲ ಮುಗಿದ ಮೇಲೆ, ಕೃಷ್ಣಕಾಂತನನ್ನು ರಾಜನ ಬಳಿಗೆ ಕರೆದುಕೊಂಡು ಹೋಗಿ, "ಮಹಾ ಪ್ರಭೂ! ಇವರು ಕೃಷ್ಣಕಾಂತ ಎಂಬ ದೊಡ್ಡ ವಿದ್ವಾಂಸರು. ನನ್ನ ಗುರುಗಳ ತಮ್ಮನ ಕುಮಾರರು. ತಮ್ಮ ಆಶ್ರಯವನ್ನು ಕೇಳಲಿಕ್ಕೆ ಬಂದಿದ್ದಾರೆ" ಎಂದು ಬಿನ್ನವಿಸಿಕೊಂಡಳು.

ಎಂ. ಎಲ್. ಗಾಯತ್ರಿ



ರಾಜನು ಕೃಷ್ಣಕಾಂತನ ಕಡೆಗೆ ಪರಿಶೀಲಿಸಿ ನೋಡುತ್ತಿರಲು, ಕೃಷ್ಣಕಾಂತನು ವಿನಯದಿಂದ "ಮಹಾಪ್ರಭೂ, ನಾನು ಕಾಶಿಯಲ್ಲಿ ವಿದ್ಯೆಯನ್ನು ಪೂರ್ತಿ ಮಾಡಿಕೊಂಡು ಬಂದಿದ್ದೇನೆ. ನೂರು ಕಾವ್ಯಗಳ ಸಹಿತವಾಗಿ, ಎಲ್ಲಾ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದ್ದೇನೆ. ಆಶುಕವಿತೆಗಳನ್ನು ಕೂಡಾ ಹೇಳಬಲ್ಲೆನು" ಎಂದನು.

ರಾಜನು ತಲೆದೂಗಿ ಮುಗುಳು ನಗು ಮಿನುಗಿಸಿದನು. ಇದನ್ನು ನೋಡಿ ತಳಮಳಗೊಂಡ ಮುಚುಕುಂದ ಪಂಡಿತನು, ಅವಹೇಳನೆಯ ಧ್ವನಿಯಲ್ಲಿ, "ಇಷ್ಟು ದೊಡ್ಡ ವಿದ್ಯಾವಂತನಾದವನಿಗೆ ಪಂಡಿತರ ಮೂಲಕ ಆಸ್ಥಾನಕ್ಕೆ ಬರಲು ಸಾಧ್ಯವಾಗದೆ, ರಾಜನರ್ತಕಿಯ ಸಹಾಯದಿಂದ ಒಳಗೆ ಬರುವ ದುರ್ದಶೆ ಬಂದ ಹಾಗಿದೆಯಲ್ಲ !" ಎಂದನು.

ಕೂಡಲೇ ಕೃಷ್ಣಕಾಂತನು ರಾಜನೊಂದಿಗೆ, "ಅಹಂಕಾರವೂ ಸ್ವಾರ್ಥವೂ ಇಲ್ಲದವರೇ ನಿಜವಾದ ಪಂಡಿತರು. ಅಭಿಮಾನವಿರುವವರು ಜಂಬುಗಾರರ ಆಶ್ರಯ ಪಡೆಯಲಾರರು. ಆದುದರಿಂದ ಇಲ್ಲಿರುವ ಪ್ರಧಾನ ಪಂಡಿತರ ಬದಲಿಗೆ ರಾಜನರ್ತಕಿಯ ಆಶ್ರಯ ಎಷ್ಟೋ ಉತ್ತಮವಾಯಿತು. ರಾಜನರ್ತಕಿ ಪಂಡಿತರ ಮೆಚ್ಚುಗೆಯನ್ನೂ ಪಡೆಯುವವಳು ತಾನೇ ?" ಎಂದನು.

ಆ ಮಾತು ಕೇಳಿ ರಾಜನು ಮುಚುಕುಂದನನ್ನು ಆಶ್ಚರ್ಯದಿಂದ ನೋಡಿದನು.

ಆಗ ಮುಚುಕುಂದನು ತೀವ್ರಸ್ವರದಿಂದ, "ನಿನ್ನೆಯಲ್ಲ ಮೊನ್ನೆ ತಾನೇ ವಿದ್ಯಾಭ್ಯಾಸ ಮುಗಿಸಿ ಬಂದವನಿಗೆ ಪಂಡಿತರ ಮೇಲೆ ಇಷ್ಟೊಂದು ಹಗುರ ಭಾವವೇ ! ಪ್ರಭೂ ! ಇವನನ್ನು ಕೂಡಲೇ ಸಭೆಯಿಂದ ಹೊರಗೆ ಕಳುಹಿಸಬೇಕೆಂದು ಕೇಳಿಕೊಳ್ಳುತ್ತೇನೆ. ಪಂಡಿತರನ್ನು ತಿರಸ್ಕರಿಸುವವನು ಈ ಸಭೆಗೆ ಕಾಲಿಡಲಿಕ್ಕೇ ಯೋಗ್ಯನಲ್ಲ" ಎಂದನು.

ಕೃಷ್ಣಕಾಂತನು ಮಂದಹಾಸದ ಮುಖದಿಂದ ಮುಚುಕುಂದನನ್ನು ನೋಡಿ, "ಅಯ್ಯಾ, ನಿಮ್ಮ ಹಾಗೆಯೇ ಪಂಡಿತನಾದ ಒಬ್ಬನನ್ನು ಸಭೆಯಿಂದ ಹೊರಗೆ ಕಳುಹಿಸುವ ರೀತಿ ನಿಮ್ಮದು ಹೊಸದಾಗಿದೆ. ನಿಮ್ಮ ಕೈಲಾದರೆ ಪಂಡಿತನೆಂದು ಹೇಳಿಕೊಳ್ಳುವ ನನ್ನೊಂದಿಗೆ ವಾದಕ್ಕೆ ನಿಂತು ಸೋಲಿಸಿ ಓಡಿಸಬೇಕು. ಬರೀ ಬಾಯಿದುರುಸಿನಿಂದ ಪಂಡಿತನನ್ನು ಅವಮಾನಿಸಿದರೆ ಕ್ಷಮಾಪಣೆ ಕೇಳಬೇಕಾಗಿ ಬರುವುದು ನಿಮಗೇ" ಎಂದನು.

"ಅದನ್ನು ಈಗಲೇ ನೋಡೋಣ" ಎಂದು ರಾಜನು ಮುಚುಕುಂದ ಕೃಷ್ಣಕಾಂತರ ನಡುವೆ ವಾದವನ್ನು ಏರ್ಪಡಿಸಿದನು.

ಮುಚುಕುಂದನು ಕೃಷ್ಣಕಾಂತನನ್ನು ಅನೇಕ ಪ್ರಶ್ನೆಗಳನ್ನು ಕೇಳಿದನು. ಎಲ್ಲದಕ್ಕೂ ಕೃಷ್ಣಕಾಂತನು ಸರಿಯಾದ ಉತ್ತರವನ್ನು ಕೊಟ್ಟು, ಸಭೆಯಲ್ಲಿದ್ದವರಿಂದ ಪ್ರಶಂಸೆಗಳನ್ನು ಸುರಿಸಿಕೊಂಡನು.

ಈಗ ಪ್ರಶ್ನೆ ಮಾಡಬೇಕಾದುದು ಕೃಷ್ಣಕಾಂತನ ಸರದಿ. ಅವನು ಮುಚುಕುಂದನನ್ನು ನೋಡಿ, "ತಮ್ಮೊಂದಿಗೆ ಮೂರು ಪ್ರಶ್ನೆಗಳನ್ನು ಕೇಳುತ್ತೇನೆ. ಸರಿಯಾದ ಉತ್ತರ ಕೊಡಿರಿ" ಎಂದು ಈ ರೀತಿ ಯಾಗಿ ಕೇಳಿದನು.

"ಹತ್ತುಮಂದಿಯೊಳಗೆ ಹಂಚುತ್ತಾ ಇರು ವಾಗಲೂ ಹೆಚ್ಚುತ್ತಾ ಹೋಗುವುದು ಯಾವದು? ಉತ್ತಮ ಪ್ರಶ್ನೆ ಎಂದು ಯಾವುದಕ್ಕೆ ಹೇಳುತ್ತಾರೆ? ಉತ್ತಮ ಗುರುವೆನ್ನಿಸಿಕೊಳ್ಳುವವರು ಎಂಥವರು?"

ಈ ಪ್ರಶ್ನೆಗಳನ್ನು ಕೇಳಿ ಮುಚುಕುಂದನು ಅಲ್ಪ ಪ್ರಶ್ನೆ ಕೇಳುವನೆಂದು ಕೋಪಾವೇಶದಿಂದ ಏನೇನೋ ಉತ್ತರಕೊಟ್ಟನು. ಅವಾವುದೂ ತನ್ನ ಪ್ರಶ್ನೆಗೆ ತಕ್ಕ ಉತ್ತರವಲ್ಲ ಎಂದನು ಕೃಷ್ಣಕಾಂತ.

"ಹಾಗಾದರೆ ನೀನೇ ಸರಿಯಾದ ಉತ್ತರ ಹೇಳು. ಮಹಾರಾಜರೂ ಸಭೆಯೂ ಅದನ್ನು ಒಪ್ಪಲಿ" ಎಂದನು ಮುಚುಕುಂದ.

ಆಗ ಕೃಷ್ಣಕಾಂತನು "ಹತ್ತು ಮಂದಿಯೊಂದಿಗೆ ಹಂಚಿಕೊಳ್ಳುತ್ತಾ ಇರುವಷ್ಟೂ ಹೆಚ್ಚುತ್ತಾ ಹೋಗು ವಂತಹುದು ಸಂತೋಷ. ಸಂದೇಹ ನಿವೃತ್ತಿ ಮಾಡಿ ಕೊಳ್ಳಲು ಕೇಳುವಂತಹುದು ಉತ್ತಮ ಪ್ರಶ್ನೆ. ವಿದ್ಯಾರ್ಥಿಯಲ್ಲಿ ವಿಜ್ಞಾನ ತೃಷೆಯನ್ನು ಹುಟ್ಟಿಸು ವವನು ಉತ್ತಮ ಗುರು. ಅಂತಹ ತೃಷ್ಣೆಯುಳ್ಳವ ನಿಗೆ ಕಲಿತು ಮುಗಿಯಿತೆಂಬ ತೃಪ್ತಿ ಉಂಟಾಗುವು ದಿಲ್ಲ. ಇನ್ನೂ ಇನ್ನೂ ಕಲಿಯಬೇಕೆಂದೇ ಇರುತ್ತದೆ. ಯಾವಾಗಲೂ ವಿದ್ಯಾನ್ವೇಷಣೆಯಲ್ಲೇ ಇರುತ್ತಾನೆ. ಗರ್ವಿಷ್ಠನಾಗನು" ಎಂದನು.

ರಾಜನು ತೃಪ್ತಿಯಿಂದ ತಲೆಯಾಡಿಸಿದನು. ಇಡೀ ಸಭೆ ಹರ್ಷಧ್ವಾನದಿಂದ ಮಾರ್ಮೊಳಗಿತು. ಮುಚುಕುಂದನು ಅವಮಾನದಿಂದ ತಲೆ ಬಗ್ಗಿಸಿ ಕೊಂಡನು. ಅನಂತರ ಕೃಷ್ಣಕಾಂತನು ರಾಜನೊಂದಿಗೆ ಮುಚುಕುಂದನ ದುಷ್ಪ್ರವರ್ತನೆಯನ್ನು ಕುರಿತು ವಿವರಿಸಿದನು.

ಅದನ್ನು ಕೇಳಿ ರಾಜನು "ಇಂತಹವನನ್ನು ಮಹಾ ಪಂಡಿತನೆಂದು ತಿಳಿದು ನಾನು ಭ್ರಮಿಸಿದೆನು" ಎಂದನು ಕೋಪದಿಂದ.

"ಮಹಾರಾಜರೇ, ಈಗ ನಡೆದ ಘಟನೆಯಿಂದ ಮುಚುಕುಂದ ಪಂಡಿತರ ಸ್ವಾರ್ಥವೂ ಅಹಂ ಕಾರವೂ ನಶಿಸಿತೆಂದೇ ನಂಬೋಣ. ತಾವು ಅವರನ್ನು ಕ್ಷಮಿಸುವುದೇ ಒಳ್ಳೆಯದೆನಿಸುತ್ತದೆ" ಎಂದನು ಕೃಷ್ಣಕಾಂತ.

ರಾಜನು ಮೌನದಿಂದ ತಲೆಯಾಡಿಸಿದನು. ಮುಚುಕುಂದನು ರಾಜನಿಗೂ ಸಭೆಗೂ ನಮಸ್ಕಾರ ಮಾಡಿ ಸಭೆಯಿಂದ ಹೊರಗೆ ಹೋದನು.



# ಸಾಲ ವಸೂಲು

ನರಸಯ್ಯನು ಯಾರ ಹತ್ತಿರವಾದರೂ ಕೈಗಡವೋ, ಸಾಲವೋ ತೆಗೆದುಕೊಂಡರೆ, ವಸೂಲು ಮಾಡಿಕೊಳ್ಳು ವುದು ಬಹಳ ಕಷ್ಟ. ಒಂದು ಸಾರಿ ಅವನು ನೆರೆಮನೆಯ ಗೋಪರಾಜನ ಹತ್ತಿರ ತಾನು ದೊಡ್ಡ ಇಕ್ಕಟ್ಟಿ ನಲ್ಲಿರುವೆನೆಂದು ಅಂಗಲಾಚಿ ಇನ್ನೂರು ರೂಪಾಯಿ ಸಾಲವಾಗಿ ಕೇಳಿದನು. ಬೇಗನೇ ಕೊಡುವುದಾಗಿ ಹೇಳಿದವನು ನಾಲ್ಕೈದು ತಿಂಗಳಾದರೂ ಕೊಡದೆ ಗೋಪರಾಜನನ್ನು ಅಲೆದಾಡಿಸ ತೊಡಗಿದನು. ತಾನು ಮನೆಯಲ್ಲಿದ್ದೂ ಇಲ್ಲವೆಂದು ಹೇಳಿಸಿದನು.

ಒಂದು ದಿನ ನರಸಯ್ಯ ಸಂತೆಯಲ್ಲಿ ಕರೆಯುವ ಹಸುವನ್ನು ಕೊಂಡುಕೊಳ್ಳಲು ಹೋಗುವನೆಂದು ಗೋಪರಾಜನಿಗೆ ತಿಳಿಯಿತು. ಅವನೂ ಸ್ವಲ್ಪ ತಡವಾಗಿ ಸಂತೆಗೆ ಹೋದನು. ನರಸಯ್ಯನಿಗೆ ಬೇಕಾದಂತಹ ಹಸು ಸಿಗಲಿಲ್ಲ.

ನೆರೆಹೊರೆಯವರಾದ ಅವರಿಬ್ಬರೂ ಕೂಡಿಕೊಂಡೇ ಕತ್ತಲೆಯಾದ ಹೊತ್ತಿಗೆ ಅದೂ ಇದೂ ಮಾತಾಡುತ್ತ ಮನೆಗೆ ಹಿಂದಿರುಗುತ್ತಿದ್ದರು.

ಆಗ ದಾರಿಯ ಬದಿಯ ಪೊದರಿನಾಚೆಯಿಂದ ಕಟ್ಟಾಳುವಾದ ಒಬ್ಬನು ದಪ್ಪವಾದ ದೊಣ್ಣೆ ತೋರಿಸಿ ಕೊಂಡು ಅವರ ಮುಂದೆ ಹಾರಿ, "ಒಳ್ಳೆಯ ಮಾತಿನಲ್ಲಿ ಇರುವ ಹಣ ಕೊಡಿರಿ. ಇಲ್ಲದಿದ್ದರೆ ತಲೆ ಒಡೆಯು ತ್ತೇನೆ" ಎಂದು ದೊಣ್ಣೆ ಎತ್ತಿದನು.

ಕಳ್ಳನು ಸಮೀಪಿಸುವುದರೊಳಗೇ ನರಸಯ್ಯ ತನ್ನ ಕೈಯಲ್ಲಿದ್ದ ಹಣದ ಗಂಟನ್ನು ಗೋಪರಾಜನ ಕೈಗೆ ಕೊಟ್ಟು, "ಇದರಲ್ಲಿ ಮುನ್ನೂರಿದೆ. ಅಸಲು ಬಡ್ಡಿ ಕಳೆದು ಉಳಿದುದನ್ನು ಆ ಮೇಲೆ ಕೊಡುವಿರಂತೆ" ಎಂದನು ಅವಸರದ ಮಾತಿನಲ್ಲಿ.

ಕಳ್ಳ ಆ ಹಣದ ಮೂಟೆ ಎಳೆದುಕೊಂಡು ಓಡಿದ.

ಮರುದಿನ ಗೋಪರಾಜನು ತನ್ನ ಮಗನ ಮೂಲಕ ಇಪ್ಪತ್ತು ರೂಪಾಯಿ ನರಸಯ್ಯನಿಗೆ ಕಳುಹಿಸಿ, ಒಂದು ಚೀಟಿಯಲ್ಲಿ "ನರಸಯ್ಯಾ, ನೀವು ನನಗೆ ಕೊಡುವ ಸಾಲ ತೀರಿತು. ರಾತ್ರಿ ಕಳ್ಳನಾಗಿ ಬಂದವನು ನನ್ನ ಆಳೇ. ಹೆಚ್ಚಿನ ಹಣ ನನಗೆ ಬೇಡ" ಎಂದು ಬರೆದಿತ್ತು.





# ಸಹಜಚಿತ್ರ

**ಹಿಂದೆ** ಚಿಗುರುಪಾಳ್ಯವೆಂಬ ದೊಡ್ಡದೊಂದು ಸಂಸ್ಥಾನವಿದ್ದಿತು. ಅಲ್ಲಿಯ ಚಿಕ್ಕರಾಜ ಜಮೀನುದಾರನು ಈ ಮೊದಲಿನವರಿಗಿಂತ ಭಿನ್ನನಾಗಿದ್ದನು. ಆತನಿಗೆ ಆಡಂಬರಗಳೆಂದರೆ ಸ್ವಲ್ಪವೂ ಹಿಡಿಸುವುದಿಲ್ಲ. ಆಶ್ರಿತರಲ್ಲಿ ಯಾರಾದರೂ ಅವನನ್ನು ಹೊಗಳಿ ಇಲ್ಲದ ಸಲ್ಲದ ಲಕ್ಷಣಗಳನ್ನು ಹೇಳಲು ನೋಡಿದರೆ, ಹೇಗಾದರೂ ಹೊಗಳಿ ಸಂತೋಷಪಡಿಸಲು ಪ್ರಯತ್ನಿಸಿದರೆ, ಅಂತಹವರನ್ನು ಸತ್ಕರಿಸುವುದಕ್ಕೆ ಬದಲಾಗಿ, ತೀವ್ರವಾಗಿ ನಿಂದಿಸಿ ಬಿಡುತ್ತಿದ್ದನು.

ಚಿಕ್ಕರಾಜನ ಭವನದಲ್ಲಿ ಆತನ ಪೂರ್ವಿಕರ ಆಳೆತ್ತರದ ಚಿತ್ರಪಟಗಳಿದ್ದುವು. ಅವುಗಳಲ್ಲಿರುವವರೆಲ್ಲರೂ ಬಹಳ ಗಂಭೀರವಾಗಿ, ಒಳ್ಳೆಯ ದರ್ಪವನ್ನು ತೋರಿಸುತ್ತಾ, ಚಿತ್ರಿಸಲ್ಪಟ್ಟಿದ್ದುವು. ತನ್ನ ಪೂರ್ವಿಕರ ನಿಜವಾದ ರೂಪರೇಖೆಗಳೂ, ಸ್ವಭಾವಗಳೂ ಹೇಗಿದ್ದುವೆಂಬುದನ್ನು ಅವರಿವರ ಬಾಯಿಯಿಂದ ಕೇಳಿ ತಿಳಿದಿದ್ದನು. ಕೇವಲ ತನ್ನ ಪೋಷಕರನ್ನು ಸಂತೋಷಪಡಿಸಲಿಕ್ಕಾಗಿಯೇ ಚಿತ್ರಕಾರರು ಅವರ ರೂಪರೇಖೆಗಳಿಗೆ ಇಲ್ಲದ ಮೆರುಗು ಕೊಟ್ಟಿರುವರೆಂದು ಚಿಕ್ಕರಾಜನು ಅಂದುಕೊಳ್ಳುತ್ತಿದ್ದನು. ಚಿಕ್ಕರಾಜನಿಗೆ ತನ್ನದೊಂದು ನಿಲುವೆತ್ತರದ ತೈಲವರ್ಣ ಚಿತ್ರ ಬರೆಯಿಸಿಕೊಳ್ಳಬೇಕೆಂಬ ಆಲೋಚನೆ ಬಂದಿತು. ಆದರೆ ಅದು ತೀರಾ ಸಹಜತೆಯಿಂದಿರಬೇಕೆಂಬುದೇ ಅವನ ಇಷ್ಟ. ಗಿರಿಕುಂಜ ಸಂಸ್ಥಾನದಲ್ಲಿರುವ ಗೋವಿಂದ ಭಟ್ಟನೆಂಬ ಚಿತ್ರಕಾರನು ಏನನ್ನಾದರೂ ಅತಿ ಸಹಜವಾಗಿ, ವಾಸ್ತವವಾಗಿ ಚಿತ್ರಿಸಬಲ್ಲನೆಂದು ಅವನಿಗೆ ತಿಳಿದು ಬಂದಿತು.

ಚಿಕ್ಕರಾಜ ಜಮೀನುದಾರನು ಗೋವಿಂದ ಭಟ್ಟನನ್ನು ತನ್ನ ಬಳಿಗೆ ಕರೆಯಿಸಿ, "ಗೋವಿಂದ ಭಟ್ಟರೆ, ನೀವು ದೊಡ್ಡ ಚಿತ್ರಕಾರರೆಂದು ಕೇಳಿದ್ದೇನೆ. ಇಲ್ಲದ ಸಲ್ಲದ ಹಂಗುಗಳನ್ನಿಟ್ಟುಕೊಂಡು ಬರೆಯ ಬೇಡಿ. ಯಥಾತಥವಾಗಿಯೇ ನನ್ನ ರೂಪರೇಖೆಗಳನ್ನು ಬರೆಯಬೇಕು. ಹಾಗಿದ್ದರೇನೇ ನಾನು ನಿಮಗೆ ಕೊಡಲು ನಿರ್ಧರಿಸಿದ ಪಾರಿತೋಷಕವನ್ನು ನೀವು ಪಡೆಯುವಿರಿ" ಎಂದನು.

ಗೋವಿಂದ ಭಟ್ಟನು ಅದಕ್ಕೆ ಒಪ್ಪಿಕೊಂಡು ಹೋಗಿ ತನ್ನ ಕೆಲಸವನ್ನು ಪ್ರಾರಂಭಿಸಿದನು. ಕೆಲವು ವಾರಗಳಲ್ಲಿ ಚಿಕ್ಕರಾಜ ಜಮೀನುದಾರನ ಚಿತ್ರವು ಪೂರ್ತಿಯಾಯಿತು. ಕಡೆಗೆ ತಿದ್ದಬೇಕಾದ, ತೀಡ

ಬೇಕಾದ ಜಾಗಗಳಲ್ಲೆಲ್ಲಾ ತಿದ್ದಿ ತೀಡಿ, ಅದನ್ನು ತೆಗೆದುಕೊಂಡು ಚಿಕ್ಕರಾಜನ ಬಳಿಗೆ ಬಂದು, "ಪ್ರಭುಗಳು ಹೇಳಿದ ಹಾಗೆಯೇ ತಮ್ಮ ಚಿತ್ರವನ್ನು ಸಹಜವಾಗಿ ಚಿತ್ರಿಸಿದ್ದೇನೆ. ತಾವು ಪರೀಕ್ಷಿಸಬಹುದು" ಎಂದನು.

ಗೋವಿಂದ ಭಟ್ಟನು ಹೇಳಿದುದರಲ್ಲಿ ಸುಳ್ಳೇನೂ ಇರಲಿಲ್ಲ. ಅವನು ಜಮೀನುದಾರನ ರೂಪರೇಖೆಗಳನ್ನು ತೀರ ಸಹಜ ರೀತಿಯಲ್ಲೇ ಚಿತ್ರಿಸಿದ್ದನು. ಆದರೂ ಗೋವಿಂದ ಭಟ್ಟನನ್ನು ಪರೀಕ್ಷಿಸಬೇಕೆಂಬ ಉದ್ದೇಶದಲ್ಲಿ ಚಿಕ್ಕರಾಜನು, "ಚೆನ್ನಾಗಿದೆಯೆಂದೇ ತೋರುತ್ತದೆ. ನಿಮ್ಮ ಚಿತ್ರ ನೈಪುಣ್ಯತೆಯನ್ನು ಹೊಗಳುವುದಕ್ಕೆ ಮೊದಲು, ಇದು ಅಚ್ಚ ನನ್ನ ಸಹಜ ರೂಪವೇ ಎಂದು ನೀವು ಹೇಗೆ ನಿರ್ಧರಿಸಿ ಕೊಂಡಿರಿ ?" ಎಂದು ಕೇಳಿದನು.

ಅದಕ್ಕೆ ಗೋವಿಂದ ಭಟ್ಟನು, "ಚಿತ್ರವು ಪೂರ್ತಿಯಾದ ಕೂಡಲೇ ಇದನ್ನು ನಮ್ಮ ಗಿರಿಕುಂಜ ಜಮೀನುದಾರರಿಗೆ ತೋರಿಸಿದೆ. ಚಿತ್ರಪಟವು ನಿಮ್ಮ ನಿಜರೂಪಕ್ಕೆ ಪ್ರತಿಬಿಂಬವಾಗಿಯೇ ಇದೆ ಎಂದು ಅವರು ತಮ್ಮ ಅಭಿಪ್ರಾಯ ತಿಳಿಸಿದರು" ಎಂದನು.

ಆ ಮಾತು ಕೇಳಿ ಚಿಕ್ಕರಾಜನು ಆಶ್ಚರ್ಯ ಪಡುತ್ತ, "ಹೌದೆ ? ಆ ನಿಮ್ಮ ಜಮೀನುದಾರರಿಗೂ ನನಗೂ ಕೆಲವು ವಿಷಯದಲ್ಲಿ ಮನಸ್ಪರ್ಧೆಯುಂಟಾಗಿದೆ. ಅಲ್ಲದೆ ಅವರಿಗೆ ಚಿತ್ರಕಲೆಯಂತಹುದರ ಮೇಲೆ ಸ್ವಲ್ಪ ಕೂಡಾ ಆಸಕ್ತಿ ಇಲ್ಲ. ಅಂತಹವರಿಗೆ ನನ್ನ ಚಿತ್ರ ತೋರಿಸುವುದರಲ್ಲಿ ನಿಮ್ಮ ಉದ್ದೇಶವೇನಿತ್ತು ? ನನಗೆ ಗೊತ್ತಾಗಲಿಲ್ಲ" ಎಂದನು.

"ಮತ್ತೇನಿಲ್ಲ, ಅವರಿಗೂ ನಿಮಗೂ ನಡುವೆ ವಿರೋಧ ಭಾವವಿರುವ ಸಂಗತಿ ನನಗೆ ಗೊತ್ತಿತ್ತು. ಆ ಕಾರಣದಿಂದಲೇ ಚಿತ್ರದಲ್ಲಿ ಏನಾದರೂ ಅಸಹಜವಾದುದಿದ್ದರೆ ಗೇಲಿ ಮಾಡಿ ಹೇಳಲಿಕ್ಕೆ ಅವರು ಸಂಕೋಚ ಪಡಲಾರರು. ಥಕ್ಕನೆ ಅವರ ಬಾಯಿಯಿಂದ ಹೊರಡುವ ಮಾತನ್ನು ಹಿಡಿದು ಸಹಜಾಸಹಜತೆಗಳನ್ನು ಕುಡುಕೊಳ್ಳಬಹುದು. ಅವರು ಚಪ್ಪಟೆಯಾದ ನಿಮ್ಮ ದವಡೆಗಳನ್ನೂ, ಬಲಗಣ್ಣಿನ ಕೆಳಭಾಗದಲ್ಲಿರುವ ಗಾಯದ ಮಚ್ಚೆಯನ್ನೂ ನಾನು



ಎಷ್ಟು ಗೋಪ್ಯವಾಗಿ ಚಿತ್ರಿಸಿದ್ದರೂ ಗುರುತಿಸಿ ಬಿಟ್ಟರು. ಇರುವವನ ಕುಂದು ಕೊರತೆ ಇರುವ ಹಾಗೇ ಬರೆದೆಯಲ್ಲಾ; ನೋಡಿದರೆ ಬೈದಾರು. ಸ್ವಲ್ಪ ತಿದ್ದಿ ಸರಿಮಾಡಿ ಒಯ್ದುಕೊಡು, ಎಂದು ಎಚ್ಚರಿಕೆ ಬೇರೆ ಹೇಳಿದರು" ಎಂದನು ಗೋವಿಂದ ಭಟ್ಟ.

"ಹಾಗೇನು ?" ಎಂದು ಸ್ವಲ್ಪ ಯೋಚಿಸಿ, "ಇಲ್ಲಿ ನಮ್ಮ ದಿವಾಣದಲ್ಲಿರುವವರಾರಿಗಾದರೂ ತೋರಿಸಿದಿರಾ ?" ಎಂದು ಕೇಳಿದನು.

"ಹೌದು ಸ್ವಾಮಿ. ನಿಮ್ಮ ದಿವಾನರಿಗೂ ಮಹಾರಾಣಿಯವರಿಗೂ ತೋರಿಸಿದೆನು. ಅವರ ಅಭಿಪ್ರಾಯವೇನೆಂದು ತಾವೇ ಸ್ವತಃ ಅವರನ್ನು ಕೇಳಿ ತಿಳಿಯಬಹುದು" ಎಂದನು ವಿನಯದಿಂದ ಗೋವಿಂದ ಭಟ್ಟ.

ಕೂಡಲೇ ಚಿಕ್ಕರಾಜನು ದಿವಾನನನ್ನು ಬರಮಾಡಿ, ತನ್ನ ತೈಲವರ್ಣ ಚಿತ್ರವನ್ನು ಕುರಿತು ಆತನ ಅಭಿಪ್ರಾಯವೇನೆಂದು ಕೇಳಿದನು.

"ಗೋವಿಂದ ಭಟ್ಟರು ಬರೆದು ತೋರಿಸಿದ ಚಿತ್ರದಲ್ಲಿ ನನಗೇನೋ ಲೋಪವಿರುವ ಹಾಗೆ ಕಾಣುತ್ತದೆ. ತಂದೆ ತಾತಂದಿರಲ್ಲಿ ಕಾಣುವ ಗಾಂಭಿರ್ಯ ಭಾವ ಚೆಂದಾಗಿ ಬಂದಿದೆ ಎಂದು ಹೇಳಲಾರೆ. ನಿಜಕ್ಕೂ ತಾವು ವಿಜಯನಗರದ ಕೃಷ್ಣದೇವರಾಯರಿಗಿರುವ ಗಾಂಭೀರ್ಯದವರು. ಆದರೆ ಅದು ಇದರಲ್ಲಿ ಮೂಡಿಬಂದ ಹಾಗಿಲ್ಲ" ಎಂದನು ದಿವಾನ.

ತರುವಾಯ ಚಿಕ್ಕರಾಜ ಜಮೀನುದಾರನು ಆ ಚಿತ್ರವನ್ನು ತನ್ನ ಹೆಂಡತಿಗೆ ತೋರಿಸಿದನು. ಅವಳು ಚಿತ್ರವನ್ನು ನೋಡುತ್ತಾ "ಈ ಚಿತ್ರದಲ್ಲಿ ನಿಮ್ಮ ಠೀವಿಯೂ ಗಾಂಭೀರ್ಯವೂ ನಿಮ್ಮ ಪೂರ್ವಿಕರಿಗೆ ಇರುವ ಹಾಗೆಯೇ ಇದೆ. ಆದರೆ ವಯಸ್ಸಿನ ವಿಷಯಕ್ಕೆ ಬಂದರೆ, ಈಗ ನಿಮಗೆ ಕಾಣುವ ವಯಸ್ಸಿಗಿಂತಲೂ ಚಿತ್ರದಲ್ಲಿ ಐವಾರು ವರ್ಷ ದೊಡ್ಡವರ ಹಾಗೆ ಕಾಣುತ್ತೀರಿ" ಎಂದಳು.

ಚಿಕ್ಕರಾಜನು ಹೆಂಡತಿಯ ಮಾತನ್ನು ಕೇಳಿ ಮಂದಹಾಸ ಬಿಂಬಿಸುತ್ತ, ಗೋವಿಂದ ಭಟ್ಟನೊಂದಿಗೆ, "ನನ್ನ ಮೇಲಿನ ಭಕ್ತಿವಿಶ್ವಾಸಗಳಿಂದ ದಿವಾನನೂ, ಪ್ರೇಮಾನುರಾಗಗಳ ಕಾರಣದಿಂದ ರಾಣಿಯೂ ಚಿತ್ರವನ್ನು ಕುರಿತು ಸರಿಯಾದ ಗಣಿಕೆ ಹಾಕಲಿಲ್ಲ. ಇದಕ್ಕೆ ನನ್ನ ಮೇಲೆ ಸದ್ಭಾವವೇನಿಲ್ಲದ ಗಿರಿಕುಂಜದ ಜಮೀನುದಾರನ ಮಾತೇ ಸರಿಯಾದ ಲೆಕ್ಕ. ಚಿತ್ರವನ್ನು ತೀರ ಸಹಜವಾಗಿ ಚಿತ್ರಿಸಿ ನೀವು ದೊಡ್ಡ ಚಿತ್ರಕಾರರೆಂಬ ಹೆಸರನ್ನು ಸಾರ್ಥಕ ಮಾಡಿಕೊಂಡಿರುವಿರಿ. ಬಹಳ ಸಂತೋಷವಾಯಿತು" ಎಂದು ಹೇಳಿ, ಚಿತ್ರಕಾರ ಗೋವಿಂದ ಭಟ್ಟನನ್ನು ಗೌರವದಿಂದ ಉಪಚರಿಸಿ, ದೊಡ್ಡ ಪಾರಿತೋಷಕವನ್ನು ಕೊಟ್ಟು ಕಳುಹಿಸಿದನು.






**ಕಂ**ಬದಿಂದ ಹೊರಬಿದ್ದ ವಿಲಕ್ಷಣಾವತಾರ ಸ್ವರೂಪವನ್ನು ನೋಡಿದ ಕೂಡಲೇ, ಹಿರಣ್ಯಕಶಿಪು ತನ್ನ ಕುಮಾರನನ್ನು ಆಲಿಂಗಿಸಿಕೊಂಡು "ಭಲೇ ಪ್ರಹ್ಲಾದಾ! ನಿನ್ನ ಮೂಲಕವಾಗಿ ಇಷ್ಟು ದಿನ ನಾನು ಹುಡುಕುವ ನನ್ನ ಶತ್ರು ವಿಷ್ಣು ಈಗ ಸಿಕ್ಕಿದ. ಹಗೆ ತೀರಿಸಿಕೊಳ್ಳುವ ಅವಕಾಶ ಬಂತು. ಇವನನ್ನು ಈಗಲೇ ಮುಗಿಸಿ ಬಿಡುತ್ತೇನೆ" ಎಂದು ಹೇಳಿ ಗದೆಯನ್ನೆತ್ತಿಕೊಂಡು ನರಸಿಂಹಾವತಾರದೊಂದಿಗೆ ಹೋರಾಡಲು ಎದೆಯುಬ್ಬಿಸಿ ನಿಂತನು. ಆಗ ನರಸಿಂಹನು ಊರು ಕೇರಿಗಳೆಲ್ಲ ನಡುಗುವಂತೆ ಪ್ರಳಯಗರ್ಜನೆ ಮಾಡುತ್ತ, ಹಾರಿ ಹಿರಣ್ಯಕಶಿಪುವನ್ನು ಅಪ್ಪಿ ಅಮುಕಿ ಹಿಡಿದು, ಮಗುವಿನಂತೆ ಎತ್ತಿ ಸಭಾಮಂಟಪದ ದ್ವಾರದ ಬಳಿಗೆ ತಂದನು. ಹಿರಣ್ಯಕಶಿಪುವಿನ ಕೈಯಲ್ಲಿದ್ದ ಗದೆ ಜಾರಿ ಬಿದ್ದಿತು.

ಹೊರಗೂ ಒಳಗೂ ಅಲ್ಲದ ದ್ವಾರದ ಹೊಸ್ತಿಲ ಮೇಲೆ, ರಾತ್ರಿಯೂ ಹಗಲೂ ಅಲ್ಲದ ಮುಸ್ಸಂಜೆಯ ಸಮಯದಲ್ಲಿ, ಆಕಾಶವೂ ಭೂಮಿಯೂ ಅಲ್ಲದ ತನ್ನ ತೊಡೆಗಳ ಮೇಲೆ ಅಂಗಾತ ಮಲಗಿಸಿ, ಸಜೀವವೂ ನಿರ್ಜೀವವೂ ಅಲ್ಲದ ಉಕ್ಕಿನಂತಹ ಉಗುರುಗಳಿಂದ, ಹಿರಣ್ಯಕಶಿಪು ಬ್ರಹ್ಮನಿಂದ ಪಡೆದ ವರಗಳಿಗೆಲ್ಲ ಭಿನ್ನ ರೀತಿಯಲ್ಲಿ ವಿಷ್ಣು, ನರನೂ ಮೃಗವೂ ಅಲ್ಲದ ರೂಪದಲ್ಲಿ ಹಿರಣ್ಯಕಶಿಪುವಿನ ಎದೆಯನ್ನೂ ಹೊಟ್ಟೆಯನ್ನೂ ಸೀಳಿ ಕೊಂದುಬಿಟ್ಟನು.

ಆಗ ರಾಕ್ಷಸ ಸೈನ್ಯವು ಸಮೂಹವಾಗಿ ನರಸಿಂಹನನ್ನು ಇದಿರಿಸಲು ಬರುತ್ತಿರಲು, ವಿಷ್ಣುಚಕ್ರವು ಅವರನ್ನೆಲ್ಲಾ ತರಿದು ಹಾಕಿತು.

ನರಸಿಂಹಮೂರ್ತಿ ಹಿರಣ್ಯಕಶಿಪುವಿನ ಕರುಳನ್ನು ಎತ್ತಿ ಬಿಡಿಸಿ ತನ್ನ ಕಂಠಹಾರವಾಗಿ ಹಾಕಿಕೊಂಡನು. ನರಸಿಂಹನ ಅತ್ಯುಗ್ರವಾದ ಅಟ್ಟಹಾಸವನ್ನು ನೋಡಿ ದೇವತೆಗಳೆಲ್ಲಾ ಹೆದರಿದರು. ಆಗ ಪ್ರಹ್ಲಾದನು ನರಸಿಂಹಮೂರ್ತಿಯನ್ನು ಸ್ತುತಿಸುತ್ತ ಶಾಂತನಾಗುವಂತೆ ಮಾಡಿದನು.

ನರಸಿಂಹನು ಪ್ರಹ್ಲಾದನೊಂದಿಗೆ, ತಂದೆಗೆ ಉತ್ತರಕ್ರಿಯೆಗಳನ್ನು ಚೆಂದಾಗಿ ಮಾಡಿ, ರಾಜ್ಯ

**೬. ತ್ರಿವಿಕ್ರಮ ವಾಮನಾವತಾರ**



ಪಾಲನೆ ಮಾಡುವಂತೆ ಹೇಳಿ ಆಶೀರ್ವದಿಸಿ, ಅಂತರ್ಧಾನನಾದನು. ಜಯವಿಜಯರ ಮೊದಲನೇ ಜನ್ಮ ಹೀಗೆ ಮುಗಿಯಿತು.

ವಿಷ್ಣುವಿನ ಆಣತಿಯಂತೆಯೇ ಪ್ರಹ್ಲಾದನು ಚಿರಕಾಲ ರಾಜ್ಯ ಪರಿಪಾಲನೆ ಮಾಡಿ, ತನ್ನ ಕುಮಾರನಾದ ವಿರೋಚನನಿಗೆ ಪಟ್ಟಗಟ್ಟಿ, ವಿಷ್ಣು ಭಕ್ತಿ ತತ್ಪರನಾಗಿ ವನಕ್ಕೆ ಹೋಗಿ ತಪಸ್ಸಿಗೆ ಕುಳಿತನು.

ವಿರೋಚನನ ತರುವಾಯ ಅವನ ಕುಮಾರನಾದ ಬಲಿ ಪಟ್ಟಕ್ಕೆ ಬಂದು ರಾಜ್ಯಪಾಲನೆ ಮಾಡತೊಡಗಿದನು. ರಾಕ್ಷಸರ ಶಿಲ್ಪಿಯಾದ ಮಯನು ನೀರ ಮೇಲೆಯೂ, ನೆಲದ ಮೇಲೆಯೂ ಅಂತರಿಕ್ಷದಲ್ಲಿಯೂ, ಪ್ರಯಾಣ ಮಾಡಬಲ್ಲ ದೊಡ್ಡ ವಾಹನವನ್ನು ನಿರ್ಮಾಣ ಮಾಡಿ ಅವನಿಗೆ ಕೊಟ್ಟನು.

ಅಮೃತವು ತಮಗೆ ದಕ್ಕದಂತೆ ಮಾಡಿದ ಅನ್ಯಾಯದಿಂದಾಗಿ ರಾಕ್ಷಸರ ಹೃದಯದಲ್ಲಿ ಪ್ರತೀಕಾರವಾಂಛೆ ಇದ್ದೇ ಇದ್ದಿತು. ಇದು ನ್ಯಾಯವಾದ ಹಗೆಯೇ ಎಂದುಕೊಂಡು ಬಲಿ ದೇವತೆಗಳೊಂದಿಗೆ ತನ್ನ ಹಿರಿಯರ ಹಾಗೆಯೇ ಹಗೆ ಇಟ್ಟುಕೊಂಡು ಯುದ್ಧಕ್ಕೆ ಇಳಿದನು.

ದೇವತೆಗಳು ಅಮೃತ ಸೇವಿಸಿ ಅಮರರಾದೆವೆಂಬ ಧೈರ್ಯೋತ್ಸಾಹದಲ್ಲಿ ಬಲಿಯನ್ನು ಬಲವಾಗಿ ಎದಿರಿಸಿ ಹೋರಾಡಿದರು. ಬಲಿಗೂ ಇಂದ್ರನಿಗೂ ಮುಖಾಮುಖೀ ಸೆಣಸಾಟ ಬಹಳ ಜೋರಿನಿಂದ ನಡೆಯಿತು. ದೇವ ಪ್ರಮುಖರಿಗೂ, ರಾಕ್ಷಸ ಪ್ರಮುಖರಿಗೂ ಖಾಡಾ ಖಾಡೀ ಯುದ್ಧ ನಡೆಯಿತು. ಆ ದೇವದಾನವ ಸಂಗ್ರಾಮದಲ್ಲಿ ರಾಕ್ಷಸರು ಪೂರ್ತಿ ಸೋತು ಹೋದರು. ಹತರಾಗಿ ಬಿದ್ದ ರಾಕ್ಷಸರನ್ನು, ರಾಕ್ಷಸರ ಕುಲಗುರುವಾದ ಶುಕ್ರಾಚಾರ್ಯನು, ಮೃತಸಂಜೀವಿನೀ ವಿದ್ಯೆಯಿಂದ ತಿರುಗಿ ಬದುಕಿಸಿಬಿಟ್ಟನು.

ಒಂದು ಸಾರಿ ಸೋತು ಹೋದುದರಿಂದ ಬಲಿ ಇನ್ನಿಷ್ಟು ದೃಢ ಸಂಕಲ್ಪ ತೊಟ್ಟು, ಹಟ ಹಿಡಿದು ತನ್ನ ರಾಕ್ಷಸ ಸೈನಿಕರನ್ನೆಲ್ಲಾ ಒಂದುಗೂಡಿಸಿ, ತಾನೇ ನಾಯಕನಾದನು. ಸೈನಿಕರಿಗೆ ನವೋತ್ಸಾಹ ಬರುವಂತಾಗಲು ಮೊದಲು ಭೂಮಂಡಲವನ್ನೆಲ್ಲಾ ಜಯಿಸಿ ಕಟ್ಟುದಿಟ್ಟವಾದ ತನ್ನ ಪರಿಪಾಲನೆಯನ್ನು ನೆಲೆಗೊಳಿಸಿ ಬಲೀಂದ್ರ ಚಕ್ರವರ್ತಿ ಎನ್ನಿಸಿಕೊಂಡನು. ಶುಕ್ರನು ಅವನಿಂದ ನೂರು ಅಶ್ವಮೇಧ ಯಾಗಗಳನ್ನೂ ಮಾಡಿಸಿದನು.

ಇದನ್ನೆಲ್ಲ ನೋಡಿ ಇಂದ್ರನು ಹೆದರಿಕೊಂಡಿರುವಾಗಲೇ ಬಲೀಂದ್ರನು ಸ್ವರ್ಗದ ಮೇಲೆ ವಿಜೃಂಭಿಸಿಕೊಂಡು ದಾಳಿ ಬಂದನು. ಅವನ ಮಹಾ ರಭಸವನ್ನು ತಾಳಿಕೊಳ್ಳಲಾಗದೆ, ಇಂದ್ರಾದಿ ದೇವತೆಗಳೆಲ್ಲಾ ಸ್ವರ್ಗವನ್ನು ಬಿಟ್ಟುಕೊಟ್ಟು ಗುಡ್ಡಗಾಡುಗಳಿಗೆ ಓಡಿಹೋದರು. ಇಂದ್ರನ ಉಚ್ಚೈಶ್ರವ ಕುದುರೆ ಬಲೀಂದ್ರನ ವಶವಾಯಿತು, ದಿಕ್ಪಾಲಕರು ಬಲಿಗೆ ವಶವರ್ತಿಗಳಾಗಿ ತಲೆ ತಗ್ಗಿಸಿ ತಿರುಗತೊಡಗಿದರು. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು



ಲೋಕಗಳನ್ನೂ ಬಲಿಚಕ್ರವರ್ತಿ ಏಕಛತ್ರಾಧಿಪತಿಯಾಗಿ ಆಳತೊಡಗಿದನು.

ಆಗ ಇಂದ್ರನ ತಾಯಿಯಾದ ಅದಿತಿ ತನ್ನ ಗಂಡ ಕಶ್ಯಪ ಪ್ರಜಾಪತಿಯ ಬಳಿಗೆ ಹೋಗಿ, ತನ್ನ ಸಂತತಿಯವರಾದ ದೇವತೆಗಳೂ, ಇಂದ್ರನೂ, ಶಚೀದೇವಿಯೂ ಅರಣ್ಯದಲ್ಲಿ ಪಡುವ ಕಷ್ಟಗಳನ್ನು ಹೇಳಿಕೊಂಡು, ಅವರ ರಾಜ್ಯವು ಅವರಿಗೆ ಸಿಗುವ ಹಾಗೆ ಮಾಡಬೇಕೆಂದು ಪ್ರಾರ್ಥಿಸಿಕೊಂಡಳು.

ಅದಕ್ಕೆ ಕಶ್ಯಪನು ತನ್ನ ಹೆಂಡತಿಯೊಂದಿಗೆ ವಿಷ್ಣು ವ್ರತವನ್ನು ಶ್ರದ್ಧೆಯಿಂದ ಆಚರಿಸುವಂತೆ ಹೇಳಿದನು. ಅದಿತಿಯ ಪೂಜಾರಾಧನೆಗಳಿಂದ ವಿಷ್ಣು ಪರಮ ಪ್ರೀತನಾದನು. ತಾನು ಅವಳ ಹೊಟ್ಟೆಯಲ್ಲಿ ಹುಟ್ಟಿ ಕಷ್ಟ ಪರಿಹಾರ ಮಾಡುವೆನೆಂದು ಅಭಯವನ್ನಿತ್ತನು.

ಈ ವಿಧವಾಗಿ ವಿಷ್ಣು ಅದಿತಿಕಶ್ಯಪರಿಗೆ ಕುಬ್ಜ ರೂಪದಿಂದ ಹುಟ್ಟಿದನು. ಇದು ವಿಷ್ಣುವಿನ ಮುಖ್ಯವಾದ ದಶಾವತಾರಗಳಲ್ಲಿ ಐದನೆಯದಾದ ವಾಮನಾವತಾರ.

ವಾಮನನಿಗೆ ತಂದೆ ಉಪನಯನ ಮಾಡಿ, ವೇದ ವಿದ್ಯೆಗಳನ್ನು ಪೂರ್ತಿ ಕಲಿಸಿದನು. ಇಂದ್ರನಿಗೆ ತಮ್ಮನಾದ ವಾಮನನು ಅದಿತಿ ತಾಯಿಯ ಮುದ್ದು ಕುಮಾರನಾಗಿ ಬೆಳೆದನು.

ಆಗ ಬಲಿಚಕ್ರವರ್ತಿ ನರ್ಮದಾ ನದಿಯ ತೀರದಲ್ಲಿ ಯಾಗಗಳೊಳಗೆಲ್ಲಾ ದೊಡ್ಡದಾದ ವಿಶ್ವಜಿದ್ಯಾಗವನ್ನು ಶುಕ್ರಾಚಾರ್ಯನ ಪೌರೋಹಿತ್ಯದಲ್ಲಿ ಪ್ರಾರಂಭಿಸಿದ್ದನು. ಅದರ ಅಂಗಕ್ರಿಯೆಯಾಗಿ ದೊಡ್ಡ ದೊಡ್ಡ ದಾನಗಳನ್ನು ಮಾಡಿಕೊಂಡಿದ್ದನು.

ವಾಮನನು ಜನಿವಾರ, ಕೃಷ್ಣಾಜಿನ, ಕಮಂಡಲು, ಓಲೆಕೊಡೆಗಳನ್ನು ಧರಿಸಿ ಬಾಲ ವಟುವಾಗಿ ಹಾವುಗೆಯನ್ನು ಮೆಟ್ಟಿಕೊಂಡು, ಮೂರ್ತೀಭವಿಸಿ ನಡೆಯುವ ಬ್ರಹ್ಮ ತೇಜಸ್ಸಿನಂತೆ ಬಲಿಚಕ್ರವರ್ತಿಯ ಬಳಿಗೆ ಹೊರಟನು.

ಬುಡುಬುಡು ನಡಿಗೆಗಳಿಂದ ಬರುವ ವಾಮನ ವಟುವನ್ನು ನೋಡಿ ಯಾಗಶಾಲೆಯಲ್ಲಿದ್ದವರೆಲ್ಲಾ ಮುಗ್ಧ ಮೋಹಿತರಾದರು. ವಾಮನನು ಬಲಿಚಕ್ರವರ್ತಿಯ ಇದಿರಿಗೆ ಹೋಗಿ "ಜಯಜಯ ಬಲೀಂದ್ರಾ!" ಎಂದನು ಆನಂದವನ್ನು ಸ್ಫುರಿಸುವ ಧ್ವನಿಯಿಂದ.

ವಾಮನನ್ನು ನೋಡಿದ ಕೂಡಲೇ ಬಲೀಂದ್ರನಿಗೆ ಅತ್ಯಾನಂದವಾಯಿತು. "ಬಾ ಪುಟ್ಟವಟು ಕಂದಾ! ಯಾರು ನೀನು ? ಇನ್ನೂ ಹಾಲಿನ ಹಸಿಯಾರದ ಎಳೆಮೂಗಿನ ವಟುವಾಗಿ ಯಾವ ಕಡೆಗೆ ಹೊರಡಿರುವೆಯಪ್ಪಾ ?" ಎಂದು ಕೇಳಿದನು.

"ಬಲೀಂದ್ರನೆಂಬ ನಿನ್ನ ಕೀರ್ತಿ ಕೇಳಿ ನಿನ್ನ ಬಳಿಗೇ ಬಂದಿದ್ದೇನೆ. ನಾನು ಯಾರೆಂದು ಬೇರೆ ಹೇಳಬೇಕೆ ? ಇರುವವರೆಲ್ಲರೂ ನನ್ನವರೇ. ಆದರೂ ಯಾಚಿಸಲಿಕ್ಕೆ ಬಂದಿದ್ದೇನೆ. ನಿನ್ನ ತಾತ ಮುತ್ತಾತಂದಿರು ವೀರಾಧಿವೀರರಾಗಿದ್ದರೆ, ನಿನ್ನ ಬಲ



ಪರಾಕ್ರಮಗಳು ದಿಗಂತಗಳನ್ನು ದಾಟಿವೆ. ವರಬಲ ಪಡೆದವರನ್ನೆಲ್ಲಾ ನೀನು ನಿನ್ನ ಸ್ವತಃ ಸತ್ವಬಲದಿಂದ ಮೀರಿರುವೆ. ಇದನ್ನೆಲ್ಲ ಕೇಳಿ, ಯಾಚಿಸುವ ನೆಪದಲ್ಲಿ ನೋಡಲು ಬಂದೆನು" ಎಂದು ಹೇಳುತ್ತಿರಲು ಬಲಿಚಕ್ರವರ್ತಿ ನಗುತ್ತ, "ನಿನ್ನ ಮಾತುಗಳು ವಿಚಿತ್ರವಾಗಿವೆ. ಯಾಗ ದೀಕ್ಷಿತನಾದ ನನ್ನ ಮುಂದೆ ಪರಾಕ್ರಮದ ವಿಷಯ ಹೇಳುತ್ತಿ. ಯುದ್ಧಮಾಡಲು ಹೇಳಲಾರೆಯಷ್ಟೆ? ಏಕೆಂದರೆ ಯುದ್ಧದ ಪ್ರಸಕ್ತಿ ಯಾವುದನ್ನೂ ಈಗ ಎತ್ತುವಂತಿಲ್ಲ" ಎಂದು ವಿನೋದವಾಗಿ ಹೇಳಿದನು.

"ಏನು ಮಾತು ಚಕ್ರವರ್ತೀ! ನನ್ನೊಡನೆ ಪರಿಹಾಸವಾಗಿ ಹೇಳುವೆಯೆಂದು ಕಾಣುತ್ತದೆ. ಮಹೋನ್ನತ ಬಲ ವಿಕ್ರಮನಾದ ನಿನ್ನ ಮುಂದೆ ಭೂಮಿಗೆ ಅಂಟಿದಂತಿರುವ ಗಿಡ್ಡ ವಾಮನನಾದ ನಾನು ಯುದ್ಧ ಕೇಳುವುದೆಂದರೇನು? ಅಂತ್ಯ ವಿಲ್ಲದ ದಾನಗಳಿಂದ ಮಹಾದಾತನಾಗಿರುವ ನಿನ್ನ ಕೀರ್ತಿಯನ್ನು ಕೇಳಿ ನನಗೆ ಬೇಕಾದುದೊಂದಿಷ್ಟು ನಿನ್ನನ್ನು ಯಾಚಿಸಿ ಪಡೆಯೋಣವೆಂತಲೇ ಬಂದೆನು. ವಟುವಾದ ನನ್ನ ಧರ್ಮ ಯಾಚನೆ ತಾನೆ? ಭಿಕ್ಷೆ, ಭಿಕ್ಷೆಗೆ ಬಂದಿದ್ದೇನಯ್ಯಾ ಬಲೀಂದ್ರಾ!" ಎಂದನು ವಾಮನ.

"ಅಷ್ಟೇನಾ? ಕೇಳು ಕೇಳು, ಯಾಗಾಂಗವಾದ ಈ ದಾನ ವೇಳೆಯಲ್ಲಿ ನೀನು ಏನು ಕೇಳಿದರೂ ಕೊಡಬೇಕು. ಕೊಡುತ್ತೇನೆ" ಎಂದನು ಬಲಿ ಚಕ್ರವರ್ತಿ.

ಆಗ ಇದನ್ನೆಲ್ಲಾ ಗಮನಿಸಿಕೊಂಡಿದ್ದ ಶುಕ್ರಾಚಾರ್ಯನು ಮೆಟ್ಟಿ ಬಿದ್ದವನಂತಾಗಿ ಬಲಿಚಕ್ರವರ್ತಿಯನ್ನು ಹತ್ತಿರ ಬರುವಂತೆ ಕರೆದು, "ರಾಜಾ ಈ ವಾಮನನು ಬೇರೆ ಯಾರೂ ಅಲ್ಲ. ಮಹಾವಿಷ್ಣುವೇ ನಿನ್ನನ್ನು ವಂಚಿಸಿ ನಿನ್ನ ಸರ್ವಸ್ವವನ್ನೂ ಅಪಹರಿಸಲು ಬಂದಿದ್ದಾನೆ. ಅವನಿಗೆ ಯಾವ ಬಗೆಯ ದಾನ ಪ್ರದಾನವನ್ನೂ ಕೊಡಬಾರದು!" ಎಂದು ಎಚ್ಚರಿಸಿದನು.

ಅದಕ್ಕೆ ಬಲಿಚಕ್ರವರ್ತಿ, "ಹಾಗೇನು! ಸಾಕ್ಷಾತ್ ವಿಷ್ಣುವೇ ನನ್ನ ಮುಂದೆ ಬಂದು ಭಿಕ್ಷಾಂದೇಹಿ ಎಂದು ಕೈ ನೀಡಿದರೆ, ನನ್ನ ಕೈ ಮೇಲಾಗಿ ದಾನ ಕೊಡುವುದೆಂದರೆ ದೊಡ್ಡ ಅದೃಷ್ಟ ಮಾತ್ರವಲ್ಲ, ನನ್ನ ಘನವಿಜಯವನ್ನೇ ಸಾರುವಂತಹುದು. ಕೊಡುತ್ತೇನೆಂದ ಮೇಲೆ ಕೊಡಲಾರೆನೆಂದು ಹೇಳುವೆನೆಂದುಕೊಂಡಿರಾ? ಅಸತ್ಯದ ದೋಷಕ್ಕೆ ನನ್ನನ್ನು ದೂಡುವಿರಾ?" ಎಂದನು.

"ಆತ್ಮರಕ್ಷಣೆಗಾಗಿ ಮಾತು ತಪ್ಪಿದರೆ ಅಸತ್ಯ ದೋಷವು ಬಾರದು. ತನ್ನನ್ನು ನಾಶಪಡಿಸುವ ಧರ್ಮವು ಆತ್ಮಹತ್ಯಾ ಪಾತಕಕ್ಕೆ ಸಮನಾದುದು" ಎಂದನು ಶುಕ್ರಾಚಾರ್ಯ.

"ಗುರುಗಳೇ! ಯಾವುದು ಏನಾದರೂ, ಅವನು ನನ್ನನ್ನು ಏನು ಮಾಡಿದರೂ ಅದು ನನಗೆ



ಸೋಲಾಗದು, ಧರ್ಮ ವೀರತ್ವವೇ ಅನಿಸುತ್ತದೆ. ಶಿಬಿಚಕ್ರವರ್ತಿಯ ಹಾಗೆ ದಾನವೀರನೆನ್ನಿಸಿಕೊಳ್ಳುವ ಆಕಾಂಕ್ಷೆ ನನಗಿಲ್ಲ. ಹೇಡಿತನದಿಂದ ಕೇಳಿದವರಿಗೆ ಕೇಳಿದುದನ್ನು ಕೊಡುವಂತಹ ಯಾಗ ದೀಕ್ಷೆಯಲ್ಲಿರುವ ನಾನು ಕೊಡುತ್ತೇನೆಂದು ಬೇರೆ ಹೇಳಿದ ಮೇಲೆ, ಭೀರುವಾಗಿ ತಪ್ಪಿಸಿಕೊಳ್ಳಲಾರೆ. ಅಂಥವನಲ್ಲ ಈ ಬಲಿ" ಎಂದು ಬಲಿಚಕ್ರವರ್ತಿ ಹೇಳಿಬಿಟ್ಟನು.

ಆ ಮಾತು ಕೇಳಿ ಶುಕ್ರಾಚಾರ್ಯನು ಕೋಪದಿಂದ, "ನಿನ್ನ ಗುರು ಪುರೋಹಿತನಾದ ನಾನು ನಿನ್ನ ಹಿತಕ್ಕಾಗಿ ಹೇಳುವುದನ್ನು ಕೇಳದೆ ನಿನ್ನ ಸರ್ವಸ್ವವನ್ನೂ ಕಳೆದು ಕೊಳ್ಳುವಿ!" ಎಂದನು ಶಾಪಕೊಟ್ಟಂತೆ.

ಬಲೀಂದ್ರನು ಕೈ ಮುಗಿದು "ಗುರುದೇವಾ! ನನ್ನನ್ನು ದಂಡಿಸುವ ಅಧಿಕಾರ ನಿಮಗಿದೆ. ಅದಕ್ಕೊಂದು ಅವಕಾಶ ಕೊಟ್ಟಂತಾಯಿತು. ನಾನೀಗ ಎಲ್ಲದಕ್ಕೂ ತಲೆ ಬಗ್ಗಿಸುವ ದಾನಕೊಡಲು ಸಿದ್ಧನಾದಂತಾಯಿತು. ಗುರು ಧಿಕ್ಕಾರದಿಂದ ಪಡೆದ ಶಾಪವನ್ನು ವಿಷ್ಣು ಅಮಲುಪಡಿಸುವಂತಾಯಿತು. ಅನ್ಯಾಯವಾಗಿ ಬಲಿಯನ್ನು ವಂಚಿಸಿದನೆಂಬ ಹೆಸರು ವಿಷ್ಣುವಿಗೂ ಬಾರದಂತೆ ನಿಮ್ಮ ಶಾಪ ಒಳ್ಳೆಯದನ್ನೇ ಮಾಡಿತು. ನಿಮ್ಮ ಶಾಪವನ್ನು ಸಂತೋಷವಾಗಿ ಸ್ವೀಕರಿಸಿದ್ದೇನೆ!" ಎಂದನು.

ಶುಕ್ರಾಚಾರ್ಯನು ನಿರುತ್ತರನಾಗಿ ತಲೆ ತಗ್ಗಿಸಿಕೊಂಡನು. ಬಲಿ ಅಲ್ಲಿಂದೆದ್ದು ವಾಮನನ ಬಳಿಗೆ ಹೋಗುವಾಗ, ಶುಕ್ರಾಚಾರ್ಯನು "ದಾನವ ರಾಜಾ, ವಿಷ್ಣು ಭಿಕ್ಷೆ ಕೇಳಲು ಬಂದು, ನಿನ್ನನ್ನು ಭಿಕ್ಷುಕನಾಗಿ ಮಾಡುವನೋ, ಅಧಃ ಪಾತಾಳಕ್ಕೇ ದೂಡುವನೋ ಏನು ಮಾಡಿದರೂ ಮಾಡಬಹುದು. ಈಗ ನಿನ್ನ ತ್ರಿಲೋಕಾಧಿಪತ್ಯವೂ, ಸಂಪತ್ತುಗಳೂ, ವೈಭವಗಳೂ ವೃಥಾ ಸಂಪಾದಿಸಿದಂತಾಗುತ್ತವೆ. ಯಾವ ಧರ್ಮವಾದರೂ ಶರೀರರಕ್ಷಣೆಯ ಅನಂತರವೇ ಎಂಬುದನ್ನು ನೆನಪಿಗೆ ತಂದುಕೋ. ಎಚ್ಚರಿಸುತ್ತೇನೆ!" ಎಂದನು.

"ರಾಜ್ಯವೂ, ಸಂಪತ್ತುಗಳೂ ಶಾಶ್ವತವಾದುವೇನಲ್ಲ. ಹೇಗೆ ಸಂಪಾದಿಸಿದೆನೋ ಹಾಗೆಯೇ ಹೋಗುವಂತಹವುಗಳೇ! ಶರೀರ ಕೂಡಾ ಶಾಶ್ವತವಲ್ಲವಷ್ಟೇ?" ಎಂದನು ಬಲಿ.

"ಈಗ ನಿನಗಾಗುವ ವಿನಾಶವು ನಿನ್ನೊಬ್ಬನದೇ ಅಲ್ಲ, ದಾನವ ಕುಲಕ್ಕೇ ಮುಪ್ಪು! ಅವಮಾನ! ನೆನಪಿಡು!" ಎಂದನು ಶುಕ್ರಾಚಾರ್ಯ.

"ಅಷ್ಟೇ ಅಲ್ಲ ಗುರುದೇವಾ; ಒಬ್ಬ ದಾನವನು ಧರ್ಮಪಾಲನೆ ಮಾಡಿದನು. ವಿಷ್ಣುವಿಗೇ ಭಿಕ್ಷೆ ಹಾಕಿದನು, ಎಂದು ದಾನವಕುಲಕ್ಕೇ ಘನತೆ ಬರುತ್ತದೆ ಸ್ವಾಮಿ!" ಎಂದು ಬಲೀಂದ್ರನು ವಾಮನನ ಬಳಿಗೆ ಹಿಂದಿರುಗಿ ಬಂದನು.

ಆಮೇಲೆ ದಾನಕಾರ್ಯ ಪ್ರಾರಂಭವಾಯಿತು. ಬಲಿಯ ಪತ್ನಿ ವಿಂಧ್ಯಾವಳಿದೇವಿ ಸುವರ್ಣ ಕಲಶ



ದಿಂದ ನೀರು ಹೊಯ್ಯುತ್ತಿರಲು, ಬಲಿ ವಾಮನನ ಪಾದಗಳನ್ನು ಬಂಗಾರದ ಹರಿವಾಣದಲ್ಲಿರಿಸಿ ತೊಳೆದು, ಆ ನೀರನ್ನು ಶಿರಸ್ಸಿಗೆ ಪ್ರೋಕ್ಷಿಸಿಕೊಂಡನು. ಆಮೇಲೆ ಬಲಿ ವಾಮನನನ್ನು ನೋಡಿ, "ಓ ವಾಮನ ಮೂರ್ತೀ! ನಿನ್ನಂಥವನು ದಾನಕ್ಕಾಗಿ ಬರುವುದು ನನ್ನ ಸುಕೃತ. ನಿನಗೆ ಏನು ಬೇಕು ಕೇಳು. ಸಿರಿಯೋ, ಸಂಪತ್ತೋ, ಮನೆ ಮಂದಿರಗಳೋ, ಸುಂದರೀಮಣಿಯರೋ, ಸಸ್ಯಶ್ಯಾಮಲ ಕ್ಷೇತ್ರಗಳೋ, ಸಾಮ್ರಾಜ್ಯ ಸರ್ವಸ್ವವೋ, ನನ್ನ ತನುವೋ ಎಲ್ಲವೂ ನಿನ್ನವೇ, ಕೇಳು" ಎಂದನು.

"ಮಹಾಬಲೀ, ಮುಗಿಯಿತೇ ನಿನ್ನ ಪಟ್ಟಿ? ಅವುಗಳಾವುದೂ ನನಗೆ ಬೇಡ, ಕೃಷ್ಣಾಜಿನ ಹರಡಿ ಕುಳಿತುಕೊಂಡು ಬ್ರಹ್ಮಾನುಷ್ಠಾನ ಮಾಡಲು ನನ್ನ ಪಾದಗಳಲ್ಲಿ ಮೂರು ಅಡಿ ಸ್ಥಳ ಮಾತ್ರ ನನಗೆ ಸಾಕು. ನಿನ್ನ ದಿಗಂತ ಪರ್ಯಂತವಾದ ಸಾಮ್ರಾಜ್ಯದಲ್ಲಿ ಅದು ಸ್ವಲ್ಪಾತಿಸ್ವಲ್ಪವಾದರೂ ನನಗೆ ಮೂರು ಲೋಕಗಳಿಗೂ ಸಾಟಿಯಾದ ಜಾಗವದು. ಅಷ್ಟು ಮಾತ್ರ ಕೊಡು" ಎಂದನು ಗಿಡ್ಡವಾಮನ.

"ಆ ಮೂರಡಿಗಳ ಜಾಗ ಕೊಟ್ಟಿದ್ದೇನೆ. ತೆಗೆದುಕೋ" ಎಂದು ಬಲಿಚಕ್ರವರ್ತಿ ಗಿಂಡಿಯ ನೀರಿನಿಂದ ಧಾರಾದತ್ತ ಮಾಡಲು ನೋಡುವಾಗ ಗಿಂಡಿಯ ಕೊಂಬಿನಿಂದ ನೀರು ಹೊರ ಬರಲಿಲ್ಲ. ನೀರಿಳಿಯದಿದ್ದರೆ ದಾನಕ್ರಮವು ಸರಿಯಾಗಲಾರದಷ್ಟೆ? ಶುಕ್ರಾಚಾರ್ಯನು ಸೂಕ್ಷ್ಮರೂಪದಲ್ಲಿ ಗಿಂಡಿಯ ಕೊಂಬಿನ ಬಾಯಿಗೆ ಅಡ್ಡಗಟ್ಟಿ ಕುಳಿತಿದ್ದನು.

ಆಗ ವಾಮನನು ದರ್ಭೆಯ ಕಡ್ಡಿ ತೆಗೆದುಕೊಂಡು ಗಿಂಡಿಯ ಕೊಂಬಿನೊಳಗೆ ಹಾಕಿ ಚುಚ್ಚಿದನು. ಶುಕ್ರಾಚಾರ್ಯನ ಒಂದು ಕಣ್ಣು ತೂತಾಗಿ, ಅಲ್ಲಿಂದ ಮಾಯವಾದನು. ಅವನ ಒಂದು ಕಣ್ಣು ಕುರುಡಾಯಿತು. ಒಕ್ಕಣ್ಣ ಶುಕ್ರಾಚಾರ್ಯನೆನಿಸಿದನು. ಅಡ್ಡ ತೊಲಗಿದುದರಿಂದ ಗಿಂಡಿಯಿಂದ ಜಲಧಾರೆ ಸರಾಗವಾಗಿ ಹರಿಯಿತು. ದಾನವಿಧಿ ಪೂರ್ತಿಯಾಯಿತು.

ಆ ಕ್ಷಣದಿಂದ ವಾಮನನು ಬೆಳೆಯ ತೊಡಗಿ ಹಾಗೆಯೇ ಬೆಳೆದು ವಿಶ್ವರೂಪಿಯಾಗಿ ಭೂಮ್ಯಾಕಾಶಗಳ ಆಧಾರ ಸ್ತಂಭವಾದನು. ಅವನ ಅಗಲವು ಭೂಮಿಯನ್ನೆಲ್ಲಾ ಆಕ್ರಮಿಸಿತು. ಅವನ ಒಂದು ಪಾದದ ಅಳತೆಗೆ ಇಡೀ ಭೂಮಂಡಲವು ಸರಿಹೋಯಿತು. ತ್ರಿವಿಕ್ರಮನಾದ ವಿಷ್ಣುಪಾದದ ನೆರಳಿನಲ್ಲಿ ಭೂತಲವೆಲ್ಲಾ ಕ್ಷಣಕಾಲ ಗಾಢಾಂಧಕಾರವಾಯಿತು. ತರುವಾಯ ಶಿವನ ಊರ್ಧ್ವ ತಾಂಡವದಂತೆ ಇನ್ನೊಂದು ಕಾಲನ್ನು ಮೇಲೆತ್ತಿ, ಆ ಒಂದೇ ಪಾದದಿಂದ ಇಡಿಯ ಆಕಾಶವನ್ನೂ ಅಳೆದನು. ಸೂರ್ಯಚಂದ್ರಾದಿ ಗ್ರಹಗಳೂ ನಕ್ಷತ್ರಮಂಡಲಗಳೆಲ್ಲಾ ಅವನ ಪಾದಕ್ಕೆ ಅಂಟಿಕೊಂಡ ರೇಣುಗಳಾಗಿ ಕಂಡವು. ಆಗ ಬ್ರಹ್ಮನು ತನ್ನ ಕಮಂಡಲುವಿನ ಜಲದಿಂದ ವಿಷ್ಣುಪಾದವನ್ನು ಅಭಿಷೇಕ ಮಾಡಿದನು.

ವಿಷ್ಣುಪಾದದಿಂದ ಜಾರಿದ ನೀರು ಆಕಾಶಗಂಗೆ ಎನಿಸಿ, ಸ್ವರ್ಗಲೋಕದಲ್ಲಿ ಮಂದಾಕಿನಿ ಎಂಬ ಶಾಖೆಯಾಗಿಯೂ ಹರಿಯಿತು.

ಆಗ ವಾಮನನ ಕಂಠಧ್ವನಿ ಕೇಳಿತು: "ಬಲೀಂದ್ರಾ? ಮೂರನೇ ಪಾದಕ್ಕೆ ಜಾಗವೆಲ್ಲಿದೆ? ತೋರಿಸುವೆಯಾ?"

"ಓ ತ್ರಿವಿಕ್ರಮ ಮೂರ್ತೀ! ಇಗೋ, ನಾನು ನಿಂತಿರುವಲ್ಲೇ ನನ್ನ ತಲೆಯಿದೆ. ಅದರ ಮೇಲೆ ಇಡು ಸ್ವಾಮಿ!" ಎಂದು ತಲೆ ಬಾಗಿದನು ಬಲಿ.

ವಿಷ್ಣು ವಿಶ್ವರೂಪವನ್ನು ಉಪಸಂಹರಿಸಿ ಮೊದಲಿನಂತೆ ವಾಮನನಾಗಿ, ಅವನ ತಲೆಯ ಮೇಲೆ ಪಾದವನ್ನಿಟ್ಟು, "ಬಲೀಂದ್ರಾ, ಭೂಮ್ಯಾಕಾಶಗಳನ್ನು ಪೂರ್ತಿ ಅಳೆದುಕೊಂಡ ನನಗೆ ನಿನ್ನ ತಲೆಯನ್ನು ಪೂರ್ತಿ ಅಳೆಯಲು ಸಾಧ್ಯವಾಗಲಿಲ್ಲ. ನಿನ್ನ ತಲೆಯ ಒಂದು ಭಾಗ ಮಾತ್ರ ನನ್ನ ಪಾದಕ್ಕೆ ಸರಿಹೋಯಿತು" ಎಂದನು.

ಆಗ ಪ್ರಹ್ಲಾದನು ಅಲ್ಲಿ ಕಾಣಿಸಿ, "ನಾರಾಯಣಾ. ನನ್ನ ಈ ಮೊಮ್ಮಗನು ನಿನಗೆ ಶತ್ರುವಲ್ಲ. ಇವನು ನಿನ್ನ ಅನುಗ್ರಹಕ್ಕೆ ಪಾತ್ರನು" ಎಂದನು.

ಬಲಿಚಕ್ರವರ್ತಿಯ ಪತ್ನಿ ವಿಂಧ್ಯಾವಳಿ ಕೈ ಜೋಡಿಸಿ "ವಾಮನ ಮೂರ್ತೀ! ದಯಾಮಯನೆಂಬ ಹೆಸರನ್ನು ಸಾರ್ಥಕಗೊಳಿಸು. ನನ್ನ ಪತಿಗೆ ಯಾವ ಕೇಡೂ ಬಾರದಂತೆ ಮಾಡುವುದು ನಿನ್ನಭಾರ!" ಎಂದಳು. ವಾಮನನೆಂದನು: "ಅಮ್ಮಾ, ನಿನ್ನ ಗಂಡನಿಗೆ ಕೆಡುಕಾಗುವಂತೆ ಮಾಡಲು ಬ್ರಹ್ಮನಿಗೂ ಸಾಧ್ಯವಿಲ್ಲ. ಆದುದರಿಂದಲೇ ನಾನು ಭಿಕ್ಷುಕನಾಗಿ ಬಂದು ದಾನ ಕೇಳಿದೆ. ಇವನ ಧರ್ಮ ಬಲವು ಅಂತಹುದು. ಕೇಳುವವನು ಕೆಳಗೆ, ಕೊಡುವವನು ಮೇಲೆಯೇ ಕಾಯಿತಾ!" ಎಂದು ಹೇಳಿ ಪ್ರಹ್ಲಾದನನ್ನು ನೋಡಿ, "ಬಲಿ ನನಗೆ ಎಷ್ಟು ಪ್ರಿಯತಮನೆಂದು ಗೊತ್ತಿದೆಯೆ?" ಎಂದು ಕೇಳುತ್ತ ವಿಷ್ಣುಕಳೆಯಿಂದ ವಿರಾಜಮಾನನಾಗಿ ಉದ್ದವಾದೊಂದು ದಂಡವನ್ನು ಹಿಡಿದುಕೊಂಡು ಪ್ರತ್ಯಕ್ಷನಾದನು.

"ಓ ಬಲಿಚಕ್ರವರ್ತೀ, ನಿನಗೆ ಸಾಟಿಯಾದವನು ಇನ್ನೊಬ್ಬನಿಲ್ಲ; ಇನ್ನು ಮುಂದೂ ಇರಲಾರ. ಆದರ್ಶಪಾಲಕರಾದ ಚಕ್ರವರ್ತಿಗಳಲ್ಲಿ ನಿನ್ನ ಹೆಸರೇ ಮೊದಲನೆಯದು. ನಿನ್ನನ್ನು ಸುತಳಕ್ಕೆ ಕಳುಹಿಸುತ್ತೇನೆ. ಅಧೋ ಲೋಕಗಳಿಗೆ ಅಧಿಪತಿಯಾಗಿ ಶಾಂತಿ ಸೌಖ್ಯಗಳಿಂದ ಅಲ್ಲಿ ಚಿರಂಜೀವಿಯಾಗಿರುವಿ. ನಿನ್ನ ಹೆಂಡತಿಯೂ ನಿನ್ನ ತಾತ ಪ್ರಹ್ಲಾದನೂ ನಿನ್ನೊಂದಿಗೇ ಇರುತ್ತಾರೆ. ಸುತಳದ ದ್ವಾರವನ್ನು ನಾನು ಈಗ ಕಾಣುವ ಹಾಗೆ ದಂಡ ಧಾರಿಯಾಗಿ ಕಾವಲು ಕಾಯುತ್ತಾ, ನಿನಗೆ ರಕ್ಷಕನಾಗಿರುತ್ತೇನೆ" ಎಂದು ಹೇಳಿ ಅಂತರ್ಧಾನನಾದನು.





# ಪ್ರಶ್ನೆಗೆ ಉಪಾಯ

**ಒಂ**ದಾನೊಂದು ದೇಶದ ಒಬ್ಬ ರಾಜನಿಗೆ ಮೂರು ಪ್ರಶ್ನೆಗಳು ತಲೆ ದೋರಿದುವು. ಯಾವ ಕೆಲಸವನ್ನು ಯಾವಾಗ ಪ್ರಾರಂಭಿಸಬೇಕು ? ಯಾರ ಆಲೋಚನೆ ಕೇಳಬೇಕು ? ಅನುಸರಿಸಬೇಕಾದ ಉತ್ತಮ ಧರ್ಮ ಯಾವುದು ?

ತನ್ನ ಮಂತ್ರಿಗಳೊಡನೆಯೂ, ಸಭೆಯವರೊಡನೆಯೂ ಈ ಪ್ರಶ್ನೆಗಳನ್ನು ಕೇಳಿ ನೋಡಿದನು. ತೃಪ್ತಿ ಯಾಗುವಂತಹ ಉತ್ತರ ಸಿಗಲಿಲ್ಲ.

ಈ ಮೂರು ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳಿದವರಿಗೆ ದೊಡ್ಡ ಬಹುಮಾನ ಕೊಡಲಾಗುವು ದೆಂದು ರಾಜನು ರಾಜ್ಯದಲ್ಲೆಲ್ಲಾ ತಿಳಿಯುವಂತೆ ಡಂಗುರ ಹೊಡೆಯಿಸಿದನು.

ಡಂಗುರದ ಸಮಾಚಾರ ಕೇಳಿ ಅನೇಕ ಮಂದಿ ಜ್ಞಾನಿಗಳೂ, ಅನುಭವ ಪಕ್ವರಾದ ವೃದ್ಧರೂ ರಾಜನ ಬಳಿಗೆ ಬಂದರು. ಯಾವ ಕೆಲಸ ಯಾವಾಗ ಪ್ರಾರಂಭಿಸಬೇಕು ಎಂಬುದಕ್ಕೆ ಪಂಚಾಂಗ ನೋಡ ಬೇಕೆಂದು ಹೆಚ್ಚಿನವರು ಹೇಳುತ್ತಿದ್ದರು. ಮತ್ತೆ ಕೆಲವರು ಪ್ರಾರಂಭಿಸುವ ಕೆಲಸವು ಕಾಲಯೋಗ ಕೂಡಿ ಬರುವುದಕ್ಕೆ ತಕ್ಕ ಹಾಗೆ ಬದಲಾಯಿಸುತ್ತ ದೆಂದು ಹೇಳಿದರು. ಅಗತ್ಯಕ್ಕೆ ತಕ್ಕ ಹಾಗೆ ಕೆಲಸವನ್ನು ಹಿಂದೆ ಮುಂದೆ ಮಾಡಿಕೊಳ್ಳಬೇಕಾಗಿ ಬರುತ್ತದೆಂದು ಇನ್ನು ಕೆಲವರು ಹೇಳಿದರು. ಹೀಗೆ ರಾಜನ ಮೊದಲನೇ ಪ್ರಶ್ನೆಗೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು. ಎರಡನೇ ಪ್ರಶ್ನೆಗೆ ಮಂತ್ರಿ ಗಳ ಆಲೋಚನೆ ಕೇಳಬೇಕೆಂದವರು ಹೆಚ್ಚು ಮಂದಿ, ಕೆಲವರು ಪಂಡಿತರ ಆಲೋಚನೆ ಕೇಳುವುದು ಒಳ್ಳೆಯದೆಂದರು. ಇನ್ನೂ ಕೆಲವರು ಸಾಮಂತರ ಆಲೋಚನೆ ಮೇಲಾದುದೆಂದರು.

ಉತ್ತಮ ಧರ್ಮ ಯಾವುದೆಂಬ ಪ್ರಶ್ನೆಗೆ ಶಾಸ್ತ್ರ ಜ್ಞಾನ ಸಂಪಾದಿಸುವುದೆಂದು ಕೆಲವರು ಹೇಳಿದರೆ, ಕೆಲವರು ವ್ರತಾನುಷ್ಠಾನಗಳು ಒಳ್ಳೆಯ ಧರ್ಮ ವೆಂದು ಹೇಳಿದರು.

ಹೀಗೆ ಎಷ್ಟೋ ವಿಧವಾದ ಉತ್ತರಗಳನ್ನು ಕೇಳಿ ದರೂ ರಾಜನಿಗೆ ತೃಪ್ತಿಯಾಗಲಿಲ್ಲ. ರಾಜನಿಂದ ಬಹುಮಾನ ಪಡೆದ ಪುಣ್ಯವಂತರೊಬ್ಬರೂ ಇರಲಿಲ್ಲ. ರಾಜನಿಗೇನೋ ಹುಚ್ಚು ಎಂದು ಕೆಲವರಿಗೆ ತೋರಿತು.

ರಾಜಧಾನಿಗೆ ಸಮೀಪದಲ್ಲಿರುವ ವನದಲ್ಲಿ ಒಬ್ಬ ಮಹರ್ಷಿ ಇದ್ದನು. ಅವನೊಬ್ಬ ವಿಚಿತ್ರ ಗುಣದ

ರಷ್ಯನ್ ಕಥೆ



ಋಷಿ; ತಪಸ್ಸನ್ನೂ ಮಾಡುವನು. ಕೆಲಸಗಳನ್ನೂ ಮಾಡುವನು. ಆತನ ಬಳಿಗೆ ಹೋಗಿ ತನ್ನ ಸಂದೇಹ ಗಳನ್ನು ತೀರಿಸಿಕೊಂಡು ಬರಬೇಕೆಂದು ರಾಜನಿಗೆ ತೋರಿತು.

ಆ ಮಹರ್ಷಿ ಆಶ್ರಮವನ್ನು ದಾಟಿ ಈಚೆಗೆ ಬರುವವನಲ್ಲ. ಹೆಚ್ಚು ಮಾತಾಡುವವನೂ ಅಲ್ಲ. ಆದುದರಿಂದ ರಾಜನು ಸಾಮಾನ್ಯನ ಹಾಗೆ ದುಸ್ತು ಹಾಕಿಕೊಂಡು ಸ್ವಲ್ಪ ಮಾತ್ರ ಪರಿವಾರದೊಂದಿಗೆ ಕುದುರೆಯ ಮೇಲೇರಿ ಆಶ್ರಮದ ಕಡೆಗೆ ಹೊರಟನು. ಆಶ್ರಮದ ಹೊರಗೇ ಅವನು ಕುದುರೆಯಿಂದಿಳಿದು, ಪರಿವಾರದವರನ್ನೂ ಅಲ್ಲೇ ನಿಲ್ಲಿಸಿ, ಸಾಮಾನ್ಯ ಮನುಷ್ಯನ ಹಾಗೆ, ತಾನೊಬ್ಬನೇ ಮಹರ್ಷಿಯ ಪರ್ಣಶಾಲೆಯ ಕಡೆಗೆ ಹೋದನು.

ಆಗ ಮಹರ್ಷಿ ಪರ್ಣಶಾಲೆಯ ಮುಂದಿನ ತೋಟದಲ್ಲಿ ಗಿಡಗಳಿಗಾಗಿ ಓಳಿ ಅಗೆಯುತ್ತಿದ್ದನು. ಅವನು ರಾಜನು ಮಾಡಿದ ನಮಸ್ಕಾರವನ್ನು ಸ್ವೀಕರಿಸಿ, ಯಾವ ಪ್ರಶ್ನೆಯನ್ನೂ ಕೇಳದೆ ತನ್ನ ಪಾಡಿಗೆ ಮತ್ತೆ ಓಳಿ ಅಗೆಯುವ ಕಾರ್ಯದಲ್ಲಿ ಮಗ್ನನಾದನು.

ರಾಜನು ಆತನೊಂದಿಗೆ, "ಸ್ವಾಮಿ, ನಾನು ತಮ್ಮೊಂದಿಗೆ ಮೂರು ಪ್ರಶ್ನೆಗಳಿಗೆ ಉತ್ತರ ತಿಳಿಯ ಬೇಕೆಂದು ಬಂದಿದ್ದೇನೆ. ಯಾವ ಕೆಲಸವನ್ನು ಯಾವಾಗ ಪ್ರಾರಂಭಿಸಬೇಕು ? ಯಾರ ಆಲೋಚನೆ ಕೇಳಬೇಕು ? ಆಚರಿಸ ತಕ್ಕ ಉತ್ತಮ ಧರ್ಮ ಯಾವುದು ? ಇವೇ ನನ್ನ ಆ ಮೂರು ಪ್ರಶ್ನೆಗಳು." ಎಂದು ಕೇಳಿದನು.

ಅಗೆಯುವುದನ್ನು ನಿಲ್ಲಿಸಿ ರಾಜನ ಮಾತುಗಳನ್ನು ಕೇಳಿದ ಋಷಿ, ಉತ್ತರವೇನೂ ಕೊಡದೆ ಮತ್ತೆ ತನ್ನ ಕೆಲಸ ಪ್ರಾರಂಭ ಮಾಡಿದನು. ರಾಜನು ಅವನನ್ನು ನೋಡಿ, "ತಾವು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ನಾನು ಅಗೆಯುತ್ತೇನೆ" ಎಂದನು. ಮಹರ್ಷಿ ಗುದ್ದಲಿಯನ್ನು ರಾಜನ ಕೈಗೆ ಕೊಟ್ಟು, ಸ್ವಲ್ಪ ದೂರ ಹೋಗಿ ನೆಲದ ಮೇಲೆ ಸುಮ್ಮನೆ ಕುಳಿತುಬಿಟ್ಟನು.

ರಾಜನು ನಾಲ್ಕು ಓಳಿಗಳನ್ನು ಅಗೆದು ಹಾಕಿ, ಮಹರ್ಷಿಯನ್ನು ನೋಡಿ ಹಿಂದಿನ ಹಾಗೆಯೇ ಆ ಮೂರು ಪ್ರಶ್ನೆಗಳನ್ನು ಕೇಳಿದನು. ಮಹರ್ಷಿ ಉತ್ತರ ಕೊಡುವುದಕ್ಕೆ ಬದಲಾಗಿ ಮತ್ತೆ ಎದ್ದು ರಾಜನ ಕೈಯಲ್ಲಿದ್ದ ಗುದ್ದಲಿಯನ್ನು ತೆಗೆದುಕೊಳ್ಳಲು ಕೈ ಚಾಚಿದನು. ಆದರೆ ರಾಜನು ಕೊಡಲಿಲ್ಲ. ಸೂರ್ಯನು ಮುಳುಗುವ ವರೆಗೂ ರಾಜನು ಓಳಿ ಗಳನ್ನು ಅಗೆದನು. ಕೆಲಸ ಪೂರ್ತಿಯಾಯಿತು. ರಾಜನ ಮೈಯೂ ಬೆವರಿತು.

ರಾಜನು ಗುದ್ದಲಿಯನ್ನು ಕೆಳಗಿಟ್ಟು "ಸ್ವಾಮಿ, ನೀವು ದೊಡ್ಡ ಜ್ಞಾನಿಗಳೆಂದೂ, ನನ್ನ ಸಂದೇಹ ಗಳನ್ನು ತೀರಿಸುವಿರೆಂದೂ ಇಲ್ಲಿಗೆ ಬಂದೆನು. ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ನಿಮಗೆ ಗೊತ್ತಿಲ್ಲ



ದಿದ್ದರೆ ಚಿಂತೆಯಿಲ್ಲ. ನನ್ನ ದಾರಿ ಹಿಡಿದು ಹೋಗ ಬಹುದೆಂದಾದರೂ ಅಪ್ಪಣೆ ಕೊಡಿರಿ" ಎಂದನು.

"ಯಾರೋ ಬರುವ ಹಾಗಿದೆ. ಏನು ವಿಶೇಷವೋ ನೋಡೋಣ" ಎಂದನು ಮಹರ್ಷಿ. ರಾಜನು ಹಿಂದೆ ತಿರುಗಿ ನೋಡಿದನು. ವನದ ಕಡೆಯಿಂದ ಆಶ್ರಮದ ಕಡೆಗೆ ಏನೋ ಸಂಕಟದಿಂದ ಬರುವ ಹಾಗೆ ಒಬ್ಬನು ಬರುತ್ತಿದ್ದನು. ಅವನು ಹೊಟ್ಟೆಯನ್ನು ಕೈಯಿಂದ ಒತ್ತಿ ಹಿಡಿದಿದ್ದಾನೆ. ಹಿಡಿದ ಆ ಬೆರಳುಗಳ ಸಂದಿ ನಿಂದ ರಕ್ತ ಒಸರುತ್ತಿದ್ದಿತು, ಅವನು ರಾಜನವರೆಗೂ ಬಂದು ಮುಲುಗುತ್ತಾ ಜ್ಞಾನ ತಪ್ಪಿಬಿದ್ದನು.

ರಾಜನೂ ಮಹರ್ಷಿಯೂ ಕೂಡಿ, ಆ ಮನುಷ್ಯನ ದುಸ್ತುಗಳನ್ನು ಬಿಡಿಸಿ ನೋಡಲು ಅವನ ಹೊಟ್ಟೆ ಯಲ್ಲಿ ದೊಡ್ಡದೊಂದು ಗಾಯವಿದ್ದಿತು. ರಾಜನು ಆ ಗಾಯವನ್ನು ಬಹಳ ಹೊತ್ತು ತೊಳೆದು, ಮಹರ್ಷಿ ಕೊಟ್ಟ ಔಷಧ ಹಚ್ಚಿದನು. ಸ್ವಲ್ಪ ಹೊತ್ತಿಗೆ ಆ ಮನುಷ್ಯನಿಗೆ ಸ್ಮೃತಿ ಬಂದಿತು. ನೀರು ಬೇಕೆಂದು ಸೈಗೆ ಮಾಡಿದನು. ರಾಜನು ಕುಟೀರ ದೊಳಗಿನಿಂದ ನೀರು ತಂದು ಅವನಿಗೆ ಕುಡಿಸಿದನು.

ಅಷ್ಟರಲ್ಲಿ ಕತ್ತಲಾಯಿತು. ರಾಜನೂ ಮಹರ್ಷಿಯೂ ಕೂಡಿ ಗಾಯಗೊಂಡವನನ್ನು ಕುಟೀರದೊಳಗೆ ಸೇರಿಸಿದರು. ರಾಜನು ಅಲ್ಲಿಯೇ ಕುಳಿತು ಮೊಣಕಾಲುಗಳೆಡೆಯಲ್ಲಿ ತಲೆ ಸೇರಿಸಿ ಕೊಂಡು ರಾತ್ರಿ ಪೂರಾ ಗಾಢ ನಿದ್ರೆ ಮಾಡಿ, ಬೆಳಗಾಗಲು ಎಚ್ಚರಕ್ಕೆ ಬಂದನು.

ರಾಜನು ಎಚ್ಚೆತ್ತನೆಂಬುದನ್ನು ತಿಳಿದು ಗಾಯಾಳು ಮನುಷ್ಯ ಎದ್ದು ಬಂದು ಕೈ ಮುಗಿದು "ಮಹಾ ರಾಜರೇ, ನನ್ನನ್ನು ಕ್ಷಮಿಸಿ" ಎಂದನು.

"ನೀನು ಯಾರೋ ನಾನು ಅರಿಯೆನು. ಏತಕ್ಕೆ ಕ್ಷಮಿಸಬೇಕು?" ಎಂದು ಕೇಳಿದನು ರಾಜ.

"ನೀವು ನನ್ನನ್ನು ಅರಿಯದಿದ್ದರೂ ನಾನು ನಿಮ್ಮನ್ನು ಅರಿತಿದ್ದೇನೆ. ನೀವು ಒಂದು ಕಾಲದಲ್ಲಿ ನನ್ನ ಅಣ್ಣನನ್ನು ಗಲ್ಲಿಗೇರಿಸಿದ್ದೀರಿ. ಆತನ ಆಸ್ತಿ ಯನ್ನು ಸ್ವಾಧೀನ ಪಡಿಸಿಕೊಂಡಿದ್ದೀರಿ. ನಿಮ್ಮನ್ನು ಕೊಂದು ಹಗೆ ತೀರಿಸಿಕೊಳ್ಳಬೇಕೆಂದು ನಾನು ನಿಮ್ಮ ಬೆಂಬತ್ತಿಕೊಂಡೇ ಇದ್ದೆ. ನೀವು ಮಹರ್ಷಿಯನ್ನು ನೋಡಲು ಹೊರಟಿರುವುದನ್ನು ತಿಳಿದು, ಆಶ್ರಮ ದಿಂದ ಹಿಂದಿರುಗಿ ಬರುವಾಗ ಕೊಲ್ಲಬೇಕೆಂದು ಪೊದರಿನಲ್ಲಿ ಅಡಗಿಕೊಂಡಿದ್ದೆ. ನೀವು ಎಷ್ಟು ಹೊತ್ತಾ ದರೂ ಬರಲಿಲ್ಲ. ಅಷ್ಟರಲ್ಲಿ ನಿಮ್ಮ ಅಂಗರಕ್ಷಕರು ನನ್ನನ್ನು ನೋಡಿ ಗುರುತಿಸಿ ಹೊಡೆದುಬಿಟ್ಟರು. ನಾನು ತಪ್ಪಿಸಿ ನಿಮ್ಮನ್ನು ಕೊಲ್ಲಲಿಕ್ಕೆ ಬಂದೆ. ನೀವು ನನ್ನ ಗಾಯವನ್ನು ತಕ್ಕ ಔಷಧದಿಂದ ವಾಸಿಮಾಡಿದಿರಿ. ಇಲ್ಲದಿದ್ದರೆ ನಾನು ರಕ್ತ ಸ್ರಾವದಿಂದ ಸತ್ತು ಹೋಗುತ್ತಿದ್ದೆ. ನೀವು ನನ್ನನ್ನು ಜೀವದೊಂದಿಗೆ ಉಳಿಸಿದರೆ, ನಾನೂ ನನ್ನ ಮಕ್ಕಳೂ ಯಾವಜ್ಜೀವವೂ ನಿಮ್ಮ ಭೃತ್ಯರಾಗಿರುತ್ತೇವೆ. ಅಣ್ಣನ ಹಾಗೆ ರಾಜದ್ರೋಹಿಯಾಗಲಾರೆ" ಎಂದನು ಆ ಮನುಷ್ಯ.

ಇಷ್ಟೊಂದು ಸುಲಭದಲ್ಲಿ ತನ್ನ ಶತ್ರುವಿನೊಂದಿಗೆ ರಾಜಿಯಾದುದನ್ನು ಅರಿತು ರಾಜನು ಸಂತೋಷ ಪಟ್ಟನು. ಆ ಮನುಷ್ಯನಿಗೆ ರಾಜ ವೈದ್ಯನಿಂದ ಚಿಕಿತ್ಸೆ ಮಾಡಿಸುವೆನೆಂದೂ, ಅವನ ಅಣ್ಣನ ಆಸ್ತಿಯನ್ನು ಅವನಿಗೆ ಕೊಡುವೆನೆಂದೂ ರಾಜನು ಅವನಿಗೆ ಮಾತು ಕೊಟ್ಟನು.

ರಾಜನು ಕುಟೀರದೊಳಗಿನಿಂದ ಹೊರಗೆ ಬಂದಾಗ ಮಹರ್ಷಿ ಓಳಿಗಳಲ್ಲಿ ಈಟು ಹಾಕಿ ಸಸಿ ನೆಡುವ ಕೆಲಸದಲ್ಲಿರುವುದನ್ನು ನೋಡಿದನು. ರಾಜನು ಆತನ ಬಳಿಗೆ ಹೋಗಿ ನಮಸ್ಕಾರ ಮಾಡಿ "ಸ್ವಾಮಿ, ನನ್ನ ಪ್ರಶ್ನೆಗಳಿಗೆ ತಾವು ಉತ್ತರಕೊಡಲಿಲ್ಲ" ಎಂದನು.

ಮಹರ್ಷಿ ಮುಗುಳುನಗು ತೋರಿ "ನಿನ್ನ ಪ್ರಶ್ನೆಗಳಿಗೆ ಉತ್ತರಗಳು ಕೃತಿಯ ಮೂಲಕ ಆಗಲೇ ಸಿಕ್ಕಿದೆಯಷ್ಟೆ? ಅರ್ಥವಾಗಲಿಲ್ಲವೇ? ನಿನ್ನೆ ನೀನು ನಾನು ತುಂಬಾ ದಣಿದುದನ್ನು ನೋಡಿ ಕನಿಕರದಿಂದ ಕೂಡಲೇ ನನಗೆ ಸಹಾಯ ಮಾಡಿದೆ. ಆಗಲೇ ನೀನು ಉತ್ತರ ಪಡೆದು ಹೊರಟು ಹೋಗಿದ್ದರೆ ಆ ಮನುಷ್ಯನಿಂದ ನಿನ್ನ ಜೀವಕ್ಕೆ ಅಪಾಯವಾಗುತ್ತಿತ್ತು. ಯಾವ ಕೆಲಸವನ್ನಾದರೂ ಮಾಡಬೇಕಾದ ಕಾಲವೆಂದರೆ ಅದೇ ಪ್ರಧಾನ ಕಾಲ. ನಿನ್ನ ಆತ್ಮ ಪ್ರೇರಣೆಯಿಂದ ನನ್ನ ಆಲೋಚನೆ ಕೇಳಲು ಬಂದಿದ್ದೀ. ನನ್ನ ಮೇಲೆ ನಂಬುಗೆಯಿದ್ದುದರಿಂದಲೇ ಅಷ್ಟು ತಾಳ್ಮೆ ವಹಿಸಿದ್ದೀ.

ತರುವಾಯ ಆ ಗಾಯಾಳು ಓಡುತ್ತಾ ಬಂದು ಬಿದ್ದಾಗ ಆತ್ಮಪ್ರೇರಣೆ ನಿನ್ನನ್ನು ಆತನ ಸೇವೆಗೆ ಹಚ್ಚಿತು. ಅದೇ ನಿನ್ನ ಪ್ರಧಾನ ಧರ್ಮವಾಯಿತು. ನಿನ್ನ ಮೂರು ಪ್ರಶ್ನೆಗಳಿಗೂ ನಿನ್ನ ಆತ್ಮ ಪ್ರೇರಣೆಯೇ ಉತ್ತರವೆಂದು ಆ ಮೂಲಕ ನಡೆದ ಕೃತಿಗಳಿಂದ ಗೊತ್ತಾಗಲಿಲ್ಲವೇ? ರಾಜಾ, ನೆನಪಿಟ್ಟುಕೋ, ಆತ್ಮವು ಯಾವಾಗಲೂ ಒಳ್ಳೆಯದನ್ನೇ ಪ್ರೇರೇಪಿಸುತ್ತದೆ. ಆ ಕ್ಷಣದಲ್ಲಿಯೇ ನಿರ್ಧರಿಸಿಕೊಳ್ಳುವವನಿಗೆ ಒಳ್ಳೆಯದೇ ಆಗುತ್ತದೆ. ಆ ಕ್ಷಣದಲ್ಲಿಯೇ ಅದಕ್ಕೆ ತಕ್ಕ ಶಕ್ತಿಯೂ ಅಧೀನದಲ್ಲಿರುತ್ತದೆ. ಆತ್ಮಸಾಕ್ಷಿಯ ಆ ಕ್ಷಣವೂ ಮೀರಿ ಹೋದರೆ ಏನು ನಡೆಯುವುದೆಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ಏಕೆಂದರೆ ಪ್ರಪಂಚವು ಸಾಧಕ ಬಾಧಕ ಭ್ರಾಮಕಗಳಾದ ನಾನಾ ವಿಷಯಗಳಿಂದ ತುಂಬಿ ಚಲಿಸುತ್ತಾ ಇದೆ. ಆತ್ಮಪ್ರೇರಣೆಯನ್ನು ಮುಚ್ಚಿ ಹಾಕುವ ಶಕ್ತಿ ಅವುಗಳಿಗಿವೆ. ಇನ್ನೊಬ್ಬರಿಗೆ ಹಿತ ಮಾಡುವುದೇ ಪರಮಧರ್ಮ. ಅದಕ್ಕಾಗಿಯೇ ಮಾನವಜನ್ಮ ಎತ್ತಿದ್ದೇವೆ. ಇದನ್ನು ಮರೆಯದಿದ್ದರೆ ಸಾಕು" ಎಂದನು.

ಅಷ್ಟು ತಿಳಿದ ಮೇಲೆ ರಾಜನ ಮನಸ್ಸಿನಲ್ಲಿ ತಿರುಗುತ್ತಿದ್ದ ಪ್ರಶ್ನೆಗಳು ಮಾಯವಾಗಿ, ತೃಪ್ತಿಯುಂಟಾಯಿತು. ಅವನು ಮಹರ್ಷಿಗೆ ನಮಸ್ಕಾರ ಮಾಡಿ ಹೊರಟುಹೋದನು.



# ವೈದ್ಯನ ಶ್ರಮ

ವೈದ್ಯರೊಳಗೆ ಅಪರಧನ್ವಂತರಿ ಎಂದು ಹೆಸರು ಪಡೆದ ನಾರಾಯಣಾಚಾರ್ಯನಿಗೆ, ಒಂದು ದಿನ ಮಧ್ಯ ರಾತ್ರಿಯ ಹೊತ್ತಿನಲ್ಲಿ, ಹರದಾರಿ ದೂರವಿರುವ ಕಮಲಾಪುರದ ಜಮೀನುದಾರರಲ್ಲಿಗೆ ಬರಬೇಕೆಂದು ಕರೆ ಬಂದಿತು. ಜಮೀನುದಾರರ ತಂದೆಗೆ ಕಾಯಿಲೆ, ಈಗಲೇ ಬರಬೇಕಂತೆ.

ಕರೆಯಲು ಬಂದ ಜಮೀನುದಾರರ ನೌಕರನೊಂದಿಗೆ ನಾರಾಯಣಾಚಾರ್ಯನು "ಈಗ ಅರ್ಧರಾತ್ರಿಯಾಗಿದೆ, ಚಳಿಬೇರೆ. ಹೊಗೆ ಮಂಜು ಕವಿದ ಹೊತ್ತು; ಆದರೂ ಉಪಾಯವಿಲ್ಲ. ನಡೆಯಪ್ಪ, ಗಾಡಿ ಎಲ್ಲಿದೆ?" ಎಂದು ಹೊರಟುನಿಂತನು.

"ಯಜಮಾನರು ಗಡಿಬಿಡಿಯಲ್ಲಿದ್ದುದರಿಂದ ಆ ಮಾತು ಮರೆತುಬಿಟ್ಟರು. ನಾವು ನಡೆದೇ ಹೋಗಬೇಕಾಗಿದೆ" ಎಂದನು ಜಮೀನುದಾರರ ನೌಕರ.

ನಾರಾಯಣಾಚಾರ್ಯನು ಬೇಗ ಬೇಗನೇ ಒಂದು ಒಂಟಿ ಎತ್ತಿನ ಗಾಡಿಯನ್ನು ಕಟ್ಟಿಸಿ ಕಮಲಾಪುರಕ್ಕೆ ಹೊರಟನು. ದಾರಿಯಲ್ಲಿ ಗಾಡಿಯ ಚಕ್ರ ಒಡೆಯಿತು. ಅಷ್ಟೊಂದು ಕತ್ತಲೆಯಲ್ಲಿ, ಚಳಿಯನ್ನು ಸಹಿಸಿಕೊಂಡು ಕಾಲು ನಡಿಗೆಯಿಂದ ಹೇಗೋ ಪೇಚಾಡಿಕೊಂಡು ಜಮೀನುದಾರರ ಮನೆಯನ್ನು ತಲಪಿದನು.

ತೀರಾ ನೋಡಿದಾಗ ಜಮೀನುದಾರರ ತಂದೆಗೆ ಹಾಗೇನೂ ಅಪಾಯ ಬಂದಿರಲಿಲ್ಲ. ತಕ್ಕ ಮಟ್ಟಿಗೆ ಸ್ವಸ್ಥರಾಗಿಯೇ ಇದ್ದರು. ನಾರಾಯಣಾಚಾರ್ಯನು ಜಮೀನುದಾರರೊಂದಿಗೆ "ಕೂಡಲೇ ಬೇಕಾದವರನ್ನೆಲ್ಲ ಕರೆಯಿಸಿರಿ" ಎಂದನು.

ಬಹಳ ಅಪಾಯದ ಪರಿಸ್ಥಿತಿಯಿಲ್ಲದಿದ್ದರೆ ನಾರಾಯಣಾಚಾರ್ಯನು ಹಾಗೆ ಹೇಳಲಾರನೆಂದುಕೊಂಡು ಜಮೀನುದಾರನು, ಗಾಡಿ, ಮೇನೆ, ಪಲ್ಲಕಿಗಳನ್ನು ಕಳುಹಿಸಿ ಸುತ್ತು ಮುತ್ತಲಿನ ಗ್ರಾಮಗಳಲ್ಲಿದ್ದ ಬಂಧುಗಳನ್ನೆಲ್ಲಾ ಕರೆಯಿಸಿದನು.

ನಾರಾಯಣಾಚಾರ್ಯನು ಜಮೀನುದಾರರಿಗೆ ಒಂದು ಮದ್ದಿನ ಪೊಟ್ಟಣವನ್ನು ಕೊಟ್ಟು, ಬಾಗಿಲಲ್ಲಿದ್ದ ಒಂದು ಪಲ್ಲಕಿ ಏರಿ ಕುಳಿತನು. ತನ್ನ ತಂದೆಗೆ ಅಷ್ಟೊಂದು ಅಪಾಯ ಸ್ಥಿತಿ ಇರುವಾಗ ವೈದ್ಯನು ಏಕೆ ಹೊರಟು ಹೋಗುವನೆಂದು ಅರ್ಥವಾಗದೆ ಜಮೀನುದಾರರು ನಾರಾಯಣಾಚಾರ್ಯನನ್ನು ನೋಡಿ, "ನನ್ನ ತಂದೆಗೆ ಏನೂ ಆಗದೆ ?" ಎಂದು ಕೇಳಿದನು.

"ಹಾಗೇನಾದರೂ ಇದ್ದರೆ ನಾನೇಕೆ ಹೊರಟು ಹೋದೇನು ? ಈ ನಡು ರಾತ್ರಿಯಲ್ಲಿ ನಾನು ಇಲ್ಲಿಗೆ ಬರಲು ಎಷ್ಟು ಶ್ರಮ ಪಟ್ಟೆನೆಂದು ನಿಮಗೆ ತಿಳಿಯಲು ನಿಮ್ಮ ಬಂಧು ಮಿತ್ರರನ್ನೆಲ್ಲಾ ಕರೆಸಿದೆನು" ಎಂದನು ನಾರಾಯಣಾಚಾರ್ಯ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೩ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**







M. Natarajan A. Syed

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಜೂಲೈ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ
* ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಮೇ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : **ಬಕಾಸುರನ ಬಾಯಿಗೆ ತಪ್ಪಿ ಸಿಕ್ಕಿಬಿಟ್ಟೆ!**

ಎರಡನೇ ಫೋಟೋ : **ನನಗೆ ಅದರ ಅರ್ಥವೇ ಸಾಕಿತ್ತು**

ಕಳುಹಿಸಿದವರು : **ಬಿ. ಶ್ಯಾಮಲಾ, ಕಿನ್ನಿಗೋಳಿ, ದಕ್ಷಿಣ ಕನ್ನಡ**

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೨

[ಅವಂತಿನಗರದಲ್ಲಿ ಮೂವರು ಸಹೋದರರಿದ್ದರು. ಚಿಕ್ಕವನಾದ ಪಿಂಗಳನು ಬಲೆ ತೆಗೆದುಕೊಂಡು ಶುಕ ಸರೋವರಕ್ಕೆ ಹೋದನು. ಅಲ್ಲಿಗೆ ಮುಂಡನನೆಂಬವನು ಬಂದು, ತನ್ನನ್ನು ಕಟ್ಟಿ ಸರೋವರಕ್ಕೆ ಹಾಕಿದರೆ ನಿನಗೆ ಲಾಭವಾಗುವುದೆಂದು ಹೇಳಲು, ಪಿಂಗಳನು ಅವನು ಹೇಳಿದಂತೆಯೇ ಮಾಡಿದನು. ಅಲ್ಲಿಂದ ನಗರದಲ್ಲಿದ್ದ ಕಾಂಚನ ಮಿತ್ರನೆಂಬ ವರ್ತಕನು ಕೊಟ್ಟ ನೂರು ಮೊಹರಿಗಳನ್ನು ಪಡೆದು ಹಿಂದಿರುಗಿದನು.]

ಪಿಂಗಳನಿಗೆ ತನ್ನಲ್ಲಿರುವ ನೂರು ಮೊಹರಿಗಳನ್ನು ನೆನೆಯುತ್ತ ಆನಂದವೂ ಆಶ್ಚರ್ಯವೂ ಉಕ್ಕುತ್ತಿರಲು, ತಾನು ಸಾಮಾನು ತೆಗೆದುಕೊಳ್ಳುವ ಅಂಗಡಿಯ ಮುಂದಿನಿಂದಾಗಿಯೇ ನಡೆಯುತ್ತಿದ್ದನು. ಅಂಗಡಿಯವನು ಕರೆಯದಿರುತ್ತಿದ್ದರೆ ಹಾಗೆಯೇ ಮುಂದೆ ಹೋಗಿ ಬಿಡುತ್ತಿದ್ದನು. ಅವನನ್ನು ನೋಡಿದ ಕೂಡಲೇ ಉತ್ಸಾಹದಲ್ಲಿರುವಂತೆ ಅಂಗಡಿಯವನಿಗೆ ತೋರಿ, "ಏನೋಯ್ ಪಿಂಗಳಾ, ಈ ದಿನ ಅದೃಷ್ಟ ತಿರುಗಿದ ಹಾಗಿದೆ. ಇಷ್ಟು ದಿನಗಳ ಮೀನುಗಳು ಒಂದೇಸಾರಿ ಸಿಕ್ಕಿರಬೇಕು ! ನಿಜತಾನೆ?" ಎಂದನು.

ಮೈ ತಿಳಿಯದಷ್ಟು ಸಂತೋಷದಲ್ಲಿರುವ ಪಿಂಗಳನಿಗೆ, ತಾನು ನೂರು ಮೊಹರಿಗಳನ್ನು ಹೇಗೆ ಸಂಪಾದಿಸಿದೆನೆಂಬ ಸ್ವಾರಸ್ಯವನ್ನು ಅಂಗಡಿಯ ಯಜಮಾನನೊಂದಿಗೆ ಹೇಳಿ ಬಿಡಬೇಕೆನಿಸಿತು. ಮರು ಕ್ಷಣದಲ್ಲಿ ಅವನಿಗೆ ಕಾಂಚನ ಮಿತ್ರನು ಹೇಳಿದ ಎಚ್ಚರಿಕೆ ನೆನಪಿಗೆ ಬಂದು, "ನಿಜವೇ ನಿಮ್ಮ ಊಹೆ. ಹತ್ತು ದಿನಗಳ ಮೇಲೆ ಈ ದಿನ ಬಲೆಯಲ್ಲಿ ಸ್ವಲ್ಪ ಹೆಚ್ಚೇ ಮೀನುಗಳು ಬಿದ್ದುವು. ಈ. ಹತ್ತು ದಿನಗಳ ವರೆಗೆ ಅವುಗಳನ್ನೆಲ್ಲಾ ಹೊರಕ್ಕೆ ಬಿಡದೆ ಯಾವ ದುರದೃಷ್ಟ ದೇವತೆಯೋ ನನ್ನನ್ನೂ ಅವುಗಳನ್ನೂ



ಹಿಡಿದುಕೊಂಡ ಹಾಗಿತ್ತು. ಈಗ ಬಿಟ್ಟು ಹೋಗಿರಬೇಕು." ಎಂದನು ವಿಚಾರದ ಮುಖಭಾವದಿಂದ.

ಆಮೇಲೆ ಪಿಂಗಳನು ಆದುವರೆಗೂ ಅಂಗಡಿಯವನಿಗೆ ಕೊಡಬೇಕಾಗಿದ್ದ ಲೆಕ್ಕ ಕೇಳಿ ನೋಡಿ ಕೊಟ್ಟು, ತನಗೆ ಬೇಕಾದ ಸಾಮಾನುಗಳನ್ನು ಕೂಡಾ ಕೊಂಡು ಕೊಂಡು ಯಾವುದೋ ಹಾಡನ್ನು ಗುನುಗುತ್ತಾ ತನ್ನ ಮನೆಗೆ ಹೋಗಿ ಸೇರಿದನು.

ಅವನು ಮನೆ ತಲಪುವಾಗ ಅಣ್ಣಂದಿರಿಬ್ಬರೂ ಕೋಣೆಯ ಗೋಡೆಗೆ ಒರಗಿಕೊಂಡು ತೂಕಡಿಸಿಕೊಂಡಿದ್ದರು, ಅವನು ಬಂದುದನ್ನು ನೋಡಿ ತಾಯಿ ಅವನ ಇದಿರಿಗೆ ಬಂದಳು, ಪಿಂಗಳನು ತಾನು ಅಂಗಡಿಯಿಂದ ಹೊತ್ತು ತಂದ ಸಾಮಾನುಗಳನ್ನು ತಾಯಿಯ ಮುಂದೆ ಇಟ್ಟು, "ಈ ದಿನ ಅದೃಷ್ಟ ಕೂಡಿಬಂತಮ್ಮಾ, ಬೇಗ ಅಡಿಗೇಗಿಡಿಗೇ ಎಲ್ಲಾ ಮುಗಿಸಿಬಿಡು. ಯಾವುದಕ್ಕೂ ಏನೂ ಕಡಿಮೆಮಾಡಬೇಡಮ್ಮ. ಧಾರಾಳವಾಗಿ ಮಾಡು." ಎಂದನು.

ಅವನ ತಾಯಿ ಉತ್ಸಾಹದಿಂದ ಅಡಿಗೆ ಮಾಡಿದಳು. ಪಿಂಗಳನೂ ಜೀವದತ್ತ ಲಕ್ಷದತ್ತರೂ ಬೇಗ ಬೇಗನೆ ಊಟ ಮಾಡಿ ಉತ್ಸಾಹದಿಂದ ಎಲ್ಲಿಗೋ ಹೊರಗೆ ಹೋಗಿಬಿಟ್ಟರು. ಅಣ್ಣಂದಿರು ಹಾಗೆ ಹೊರಟುಹೋದ ಮೇಲೆ ಪಿಂಗಳನು ಜೇಬಿನಿಂದ ಮೊಹರಿಗಳ ಚೀಲವನ್ನು ತೆಗೆದು ಜಣಜಣಿಸಿ ತಾಯಿಗೆ ತೋರಿಸಿದನು.

ಅಷ್ಟೊಂದು ಹಣವನ್ನು ಒಮ್ಮೆಗೇ ನೋಡಿದ ತಾಯಿ ಆಶ್ಚರ್ಯ ಪಡುತ್ತ "ಇಷ್ಟು ಹಣ ಹೇಗೆ ಸಂಪಾದಿಸಿದೆಯೋ ಮಗಾ ?" ಎಂದು ಕೇಳಿದಳು. ಪಿಂಗಳನು ತಾಯಿಯ ಮುಂದೆ ಮುಚ್ಚು ಮರೆ ಏನೂ ಮಾಡದೆ ಆ ಹಣವು ಕೈಗೆ ಬಂದ ಬಗೆಯನ್ನು ವಿವರವಾಗಿ ಹೇಳಿದನು.

ತಾಯಿ ಅದನ್ನೆಲ್ಲ ಕೇಳಿ, "ಪಿಂಗಳಾ, ನೀನು ಮಾಡಿದ ಕೆಲಸ ಬೇರೆ ಯಾರಿಗಾದರೂ ತಿಳಿದರೆ ಗಂಡಾಂತರ ಬರುತ್ತದೆ. ಇನ್ನು ಮೇಲೆ ನೀನು ಆ ಶುಕಸರೋವರದ ಕಡೆಗೆ ಹೋಗಲೇ ಬೇಡ" ಎಂದಳು ಹೆದರುತ್ತ.

ತಾಯಿಯ ಭಯವನ್ನು ನೋಡಿ ಪಿಂಗಳನು ನಗಾಡುತ್ತ, "ನಾನು ಮಾಡಿದ್ದು ತಪ್ಪು ಹೇಗೆ ಆಗುತ್ತದಮ್ಮಾ ? ನಾನಾಗಿ ಏನಾದರೂ ತಪ್ಪು ಮಾಡಿದ್ದೇನೆಯೆ? ಅಲ್ಲಿಗೆ ಬಂದವನು ಬೇಕೆಂತಲೇ ಒತ್ತಾಯ ಮಾಡಿ ಕೈಗಳನ್ನು ಬೆನ್ನಿಗೆ ಕಟ್ಟಿಸಿಕೊಂಡು ಸರೋವರದಲ್ಲಿ ಮುಳುಗಿ ಸತ್ತ, ಅವನ ಹಣೆಯಲ್ಲಿ ಹಾಗೆ ಮಾಡಿಸಿಕೊಂಡು ಸಾಯಬೇಕೆಂದು ಬರೆದಿದೆ. ಆದರೂ ಈ ಸಂಗತಿ ಬೇರೆ ಯಾರಿಗೂ ತಿಳಿಯದಂತೆ ಅಡಗಿಸಿಟ್ಟುಕೊಂಡರಾಯಿತು. ಅಷ್ಟೇ" ಎಂದನು.

"ನಿನ್ನ ಅಣ್ಣಂದಿರ ಸಂಗತಿ ಗೊತ್ತು ತಾನೇ ? ಅವರು ಒಳ್ಳೆಯವರಲ್ಲ. ಕರ್ಮ ಸುಟ್ಟು ನನ್ನ ಹೊಟ್ಟೇಲಿ ಹುಟ್ಟಿದ್ದಾರೆ. ಈಗ ನಡೆದದ್ದು ಅವರ

ಕಿವಿಗೆ ಬೀಳಬಾರದು. ನಿನ್ನ ಮೇಲಿನ ಹೊಟ್ಟೇ ಕಿಚ್ಚಿನಿಂದ ಇವರೇನಾದರೂ ಕೇಡುಮಾಡಲೂ ಬಹುದು. ಜಾಗ್ರತೆ ಮಗಾ" ಎಂದಳು ತಾಯಿ.

ಹತ್ತು ದಿನಗಳ ತರುವಾಯ ಪಿಂಗಳನಿಗೆ ಆ ರಾತ್ರಿ ಹಾಯಾಗಿ ನಿದ್ದೆ ಬಂದಿತು. ಮರು ದಿನ ಬೆಳಗಾದ ಕೂಡಲೇ ಪಿಂಗಳನು, ಮೀನು ಹಿಡಿಯುವ ಬಲೆಯನ್ನು ಎತ್ತಿಕೊಂಡು ಶುಕಸರೋವರದ ಕಡೆಗೆ ಹೋದನು. ನಡು ಮಧ್ಯಾಹ್ನದ ವರೆಗೆ ಬಲೆ ಬೀಸಿ ಬೀಸಿ ನೋಡಿದರೂ ಒಂದು ಮೀನು ಕೂಡಾ ಅವನಿಗೆ ಸಿಗಲಿಲ್ಲ. ಅವನು ನಿರುತ್ಸಾಹದಿಂದ ಇನ್ನು ಮನೆಗೆ ಹೋಗೋಣವೇ ಎಂದು ಯೋಚಿಸುತ್ತಿರುವಾಗ, ತುಸು ದೂರದಲ್ಲಿ ವೇಗವಾಗಿ ಈ ಕಡೆಗೇ ಬರುವ ಕುದುರೆಯ ರಾಹುತನೊಬ್ಬನು ಕಂಡು ಬಂದನು.




ಪಿಂಗಳನು ಅದುರಿಬಿದ್ದು ನೋಡಿದನು. ಕುದುರೆಯ ಮೇಲೇರಿಕೊಂಡು ಬರುವ ಆ ಮನುಷ್ಯನು ನಿನ್ನೆ ಬಂದ ಮಂಡನನ ಹಾಗೆಯೇ ಕಾಣುತ್ತಾನೆ, ಸರೋವರದಲ್ಲಿ ಮುಳುಗಿಹೋದವನು ಪಿಶಾಚಿಯಾಗಿ ಬರುವುದಲ್ಲವಷ್ಟೆ?

ಸಂಶಯಿಸುತ್ತಾ ನೋಡುವ ಪಿಂಗಳನಿಗೆ, ಅವನು ಸಮೀಪಿಸುತ್ತಿದ್ದಂತೆ, ಕುದುರೆಯ ಬಣ್ಣ ಬೇರೆಯಾಗಿ ಕಂಡಿತು. ಅಷ್ಟರೊಳಗೆ ಸಮೀಪ ಬಂದ ರಾಹುತನು ನಗುತ್ತಾ ಕುದುರೆಯಿಂದ ಇಳಿದು "ಪಿಂಗಳಾ, ನಿನ್ನಿಂದ ನನಗೊಂದು ಸಹಾಯವಾಗಬೇಕು" ಎಂದನು ಪರಿಚಯದವನ ಹಾಗೆ.

ಪಿಂಗಳನು ಹೆದರುತ್ತಾ ಅವನನ್ನು ಮಿಕಿಮಿಕಿ ನೋಡುತ್ತಿದ್ದನು. ಈಗ ಬಂದವನು ಮಂಡನನ ಹೋಲಿಕೆಯಲ್ಲಿರುವುದು ನಿಜವೇ. ಆದರೆ ವಯಸ್ಸಿನಲ್ಲಿ ಮಾತ್ರ ಅವನಿಗಿಂತ ಸ್ವಲ್ಪ ಚಿಕ್ಕವನಂತೆ ಕಾಣುತ್ತಿದ್ದಾನೆ. ಕುದುರೆಯೂ ಬೇರೆಯೇ, ಆದರಿಂದ ಈಗ ಬಂದವನು ಪಿಶಾಚಿಯಲ್ಲವೆಂದು ದೃಢವಾಯಿತು, ಸ್ವಲ್ಪ ಧೈರ್ಯ ಬಂದಿತು. ಇವನಿಗೂ ತನ್ನ ಹೆಸರು ಗೊತ್ತಿರುವುದೊಂದು ಆಶ್ಚರ್ಯ!

"ನಾನಂತೂ ನಿಮ್ಮನ್ನು ಈವರೆಗೂ ನೋಡಲಿಲ್ಲ. ನನ್ನ ಹೆಸರು ನಿಮಗೆ ಹೇಗೆ ಗೊತ್ತು? ನನ್ನಿಂದ ನಿಮಗೆ ಆಗ ಬೇಕಾದ ಸಹಾಯವೇನದು?" ಎಂದು ಪಿಂಗಳನು ಕೇಳಿದನು.

ಈ ಪ್ರಶ್ನೆಯನ್ನು ಕೇಳಿ ಅವನು ದೊಡ್ಡದನಿಯಿಂದ ನಗಾಡಿ, "ಪಿಂಗಳಾ, ನಿನ್ನ ಹೆಸರು ನನಗೆ ಹೇಗೆ ಗೊತ್ತಾಯಿತೆಂದು ಕೇಳುವಿಯಾ? ನನಗೆ ನಿನ್ನಿಂದಾಗ ಬೇಕಾದ ಕೆಲಸ ಕೂಡಾ ನಿನಗೆ ತಿಳಿಯದ್ದೇನೂ ಅಲ್ಲ. ನನ್ನ ಹೆಸರು ಅನುರೂಪ. ನಿನ್ನೆ ನಿನ್ನ ಸಹಾಯ ಕೇಳಿದ ಮಂಡನನು ನನ್ನ ಸಹೋದರನೇ. ನನಗೂ ನಿನ್ನಿಂದ ಅಂತಹ ಸಹಾಯವೇ ಆಗಬೇಕಾಗಿದೆ" ಎಂದನು.

"ಓಹೋ! ನಿನ್ನೆ ನನ್ನನ್ನು ಮಾತಾಡಿಸಿದ ಮಂಡನನೆಂಬವನು ನಿಮ್ಮ ಸೋದರನೇ? ಅವನು




ಈಗ ಎಲ್ಲಿದ್ದಾನೆಂಬುದು ನಿಮಗೆ ಗೊತ್ತಿದೆಯೆ?" ಎಂದು ಕೇಳಿದನು ಪಿಂಗಳ.

ಅನುರೂಪನು ಹೊಟ್ಟೆ ಹುಣ್ಣಾಗುವ ಹಾಗೆ ಗಹಗಹಿಸಿ ನಕ್ಕು, ಸರೋವರದ ಮಧ್ಯಕ್ಕೆ ಕೈ ತೋರಿಸುತ್ತ, "ಬಹುಶಃ ಮಂಡನನು ಅಲ್ಲಿ ಕೊಳೆತುಕೊಂಡಿರಬಹುದು. ಅಥವಾ ಯಾವ ಜಲಚರಗಳ ಹೊಟ್ಟೆಯೊಳಗೆ ಸೇರಿರಲೂ ಬಹುದು. ಈ ಸಂಗತಿ ನನಗಿಂತ ಮೊದಲು ನಿನಗೇ ಗೊತ್ತಿದೆ ಹೌದಾ?" ಎಂದನು.

"ಹಾಗಾದರೆ ನಿನ್ನೆ ಇಲ್ಲಿ ನಡೆದುದೆಲ್ಲಾ ನಿಮಗೆ ಗೊತ್ತಿದೆಯೆಂದಾಯಿತು" ಎಂದನು ಪಿಂಗಳನು ಆಶ್ಚರ್ಯದಿಂದ.

"ಹೌದು. ಎಲ್ಲವೂ ನನಗೆ ಗೊತ್ತಿದೆ. ನಿನ್ನಿಂದ ನನಗೆ ಕೂಡಾ ಅಂತಹ ಸಹಾಯವೇ ಆಗ ಬೇಕಾಗಿದೆ. ಮಾಡುವಿಯಪ್ಪೆ?" ಎಂದನು ಅನುರೂಪ ನಗುತ್ತ.

"ಮಾಡುತ್ತೇನೆ. ಆದರೆ ಅಂತಹ ಸಹಾಯಕ್ಕೆ ಈಸಾರಿ ಇನ್ನೂರು ಮೊಹರಿಗಳು ಸಿಗಬೇಕು. ಇಲ್ಲದಿದ್ದರೆ ನನ್ನಿಂದಾಗದು." ಎಂದನು ಪಿಂಗಳ.

ಅನುರೂಪನು ಮತ್ತೆ ನಗುತ್ತ, ಪಿಂಗಳನ ಬೆನ್ನು ಚಪ್ಪರಿಸಿ, "ಹೌದು. ನೀನು ಇನ್ನೂರು ಮೊಹರಿ ಕೇಳಬಹುದೆಂದು ಮೊದಲೇ ನನಗೆ ಅನುಮಾನವಾಗಿತ್ತು. ಅದರಂತೆಯೇ ಕಾಂಚನ ಮಿತ್ರನ ಹತ್ತಿರ ಏರ್ಪಾಡು ಮಾಡಿಟ್ಟೇ ಬಂದಿದ್ದೇನೆ. ಆದರೆ ನಾನು ಸರೋವರದಿಂದ ಬದುಕಿ ಹೊರಬೀಳಲಾರೆನೆಂದು ನಿನಗೇಕೆ ನಂಬುಗೆ ಬರಬೇಕು?" ಎಂದು ಕೇಳಿದನು.

"ಹಾಗೆ ನಾನು ನಂಬಿದ್ದೇನೆಂದು ನಿಮಗೇಕೆ ಸಂದೇಹ ಬರಬೇಕು? ಬೇಡ, ನೀವು ನನ್ನೊಡನೆ ಏನೋ ವಾದ ವಿವಾದ ಮಾಡುವ ಹಾಗಿದೆ. ನನ್ನನ್ನು ಸುಮ್ಮನೆ ಬಿಡಿ" ಎಂದನು ಪಿಂಗಳ.

"ಹೋಗಲಿ ಬಿಡು" ಎಂದು ಅನುರೂಪನು ಸಿದ್ಧನಾಗಿ ನಿಂತನು. ಪಿಂಗಳನು ಅವನ ಕೈಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿ, ಅವನನ್ನು ಎತ್ತಿ ಹೊತ್ತುಕೊಂಡು, ಸರೋವರದ ತೀರದಿಂದ ನೀರಿನೊಳಗೆ ಬೀಸಿ ಒಗೆದನು. ಅನುರೂಪನು ಸರೋವರದಲ್ಲಿ ಬೀಳುವುದಕ್ಕೆ ಮೊದಲು, "ಪಿಂಗಳಾ, ನೋಡುತ್ತಾ ಇರು. ನನ್ನ ತಲೆ ಮೊದಲು ನೀರಿನ ಮೇಲೆ ತೇಲಿದರೆ ಕೂಡಲೇ ಬಲೆಬೀಸಿ ನನ್ನನ್ನು ತೀರಕ್ಕೆ ಎಳೆದು ಬಿಡು" ಎಂದು ಕೂಗಿ ಹೇಳಿದನು.

ಪಿಂಗಳನು ಬಲೆಯನ್ನು ತಯಾರಾಗಿ ಹಿಡಿದು ತೀರದಲ್ಲಿ ನಿಂತು ನೋಡುತ್ತಿದ್ದನು. ಸರೋವರದಲ್ಲಿ ಸ್ವಲ್ಪ ಹೊತ್ತು ತೆರೆಗಳು ಎದ್ದುವು. ಒಂದೆರಡು ನಿಮಿಷಗಳಲ್ಲಿ ನೀರಿನಿಂದ ಚಿಕ್ಕ ಚಿಕ್ಕ ಗುಳ್ಳೆಗಳೆದ್ದುವು. ಆಮೇಲೆ ಅನುರೂಪನ ಕಾಲುಗಳು ನೀರ ಮೇಲೆ ತೇಲಿದುವು.

"ಸತ್ತನು ಪಾಪ!" ಎಂದು ಕೊಂಡು ಪಿಂಗಳನು ಅನುರೂಪನ ಕುದುರೆಯ ಮೇಲೇರಿ, ಹಿಂದಿರುಗಿ ನೋಡದೆಯೇ ಪಟ್ಟಣಕ್ಕೆ ಹೋದನು.




ಕಾಂಚನ ಮಿಶ್ರನು ಅವನನ್ನು ಅಷ್ಟು ದೂರದಿಂದ ನೋಡಿದ ಕೂಡಲೇ "ಬಂದೆಯಾ ? ದುರಾಶೆಯೇ ದುಃಖಕ್ಕೆ ಮೂಲ!" ಎಂದು ಗಟ್ಟಿಯಾಗಿ ಕೂಗಿ ಹೇಳಿ, ಇನ್ನೂರು ಮೊಹರಿಗಳನ್ನು ಎಣಿಸಿ ಪಿಂಗಳನ ಕೈಗೆ ಕೊಟ್ಟನು.

"ದುರಾಶೆಯಾರದು ? ನನ್ನದೆ ? ಈ ಎರಡು ನೂರು ಮೊಹರಿಗಳಿಗಾಗಿ ನಾನೆಷ್ಟು ಶ್ರಮ ಪಟ್ಟಿದ್ದೇನೆಂದು ನಿಮಗೆ ಗೊತ್ತಿದೆಯೆ? ಇದೇನು ಸಾಮಾನ್ಯದ ಕೆಲಸವೆ? " ಎಂದು ಕಾಂಚನಮಿಶ್ರನನ್ನು ನೋಡಿ ಪಿಂಗಳನು ಕೇಳಿದನು.

ಆ ಮಾತಿಗೆ ಕಾಂಚನ ಮಿಶ್ರನು ಬೇಸರಗೊಂಡವನಂತೆ ತಲೆಯಾಡಿಸಿ, "ದುರಾಶೆ ನಿನ್ನದಲ್ಲ; ಸತ್ತು ಹೋದವರದು. ನೀನು ಮಾಡುವ ಕೆಲಸ ಏನೆಂದು ಬಹಿರಂಗವಾಗಿಬಿಟ್ಟರೆ ನಿನಗೆ ಬರುವ ಗಂಡಾಂತರವೇನೆಂದು ಕೂಡಾ ಊಹಿಸಬಹುದು. ಅದು ಹೋಗಲಿ, ನಿನ್ನಲ್ಲಿಯೂ ದುರಾಶೆ ತಲೆಯೆತ್ತುತ್ತಿದೆಯೆಂದೇ ಹೇಳಿದರೂ ತಪ್ಪೆಂದು ಹೇಗೆ ಹೇಳುವೆ? ನಿನ್ನೆ ನೂರು ಮೊಹರಿಗಳಾದರೆ ಈ ದಿನ ಇನ್ನೂರು ಮೊಹರಿಗಳು! " ಎಂದನು.

"ನಾಳೆ ಮುನ್ನೂರು ಮೊಹರಿಗಳು, ನೆನಪಿಡಿ, ಅದಕ್ಕಿಂತ ಕಡಿಮೆಯಾದರೆ ನಾನು ಯಾರಿಗೂ ಸಾಯಲಿಕ್ಕೆ ಸಹಾಯಮಾಡಲಾರೆ. ಮನುಷ್ಯರಿಗೆ ಆಶೆಯಿಲ್ಲದಿದ್ದರೆ ನಡೆದೀತೆ? ವ್ಯಾಪಾರ ಮಾಡುವುದೂ ಆಶೆಯಲ್ಲವೇ? " ಎಂದು ಹೇಳುತ್ತ ಪಿಂಗಳನು ಮನೆಗೆ ಹಿಂದಿರುಗಿದನು.

ರಾತ್ರಿಯಲ್ಲಿ ಪಿಂಗಳನು ತಾಯಿಗೆ ತಾನು ತಂದ ಇನ್ನೂರು ಮೊಹರಿಗಳನ್ನು ಕೊಟ್ಟನು. ಅಷ್ಟು ಹಣವನ್ನು ನೋಡಿದ ಕೂಡಲೇ ತಾಯಿ ಹೆದರಿಕೆಯಿಂದ ನಡುಗಿ ಹೋದಳು.

ಥಕ್ಕನೆ ಅವಳ ಮಾತಾಡುವ ಶಕ್ತಿ ಬಿದ್ದು ಹೋಯಿತು. ಮಗನ ಮುಖವನ್ನೇ ಸ್ವಲ್ಪ ಹೊತ್ತು ರೆಪ್ಪೆ ಬಡಿಯದೆ ನೋಡಿದಳು. ಆಮೇಲೆ ಅವಳ ನಾಲಗೆ ಕದಲಿತು.

"ಅಪ್ಪಾ ! ಇನ್ನಾದರೂ ನೀನು ಆ ಸರೋವರದ ಕಡೆಗೆ ಹೋಗುವುದನ್ನು ಬಿಡು. ನನಗೇನೋ ದೊಡ್ಡ ಭಯವಾಗಿದೆಯಪ್ಪಾ !" ಎಂದಳು.

"ಭಯವೇನೂ ಇಲ್ಲಮ್ಮ. ಇದರಲ್ಲಿ ಸುಳ್ಳು ಕಳ್ಳತನ ಏನೂ ಇಲ್ಲವಷ್ಟೆ? ಮತ್ತೇನಿದೆ ಹೆದರಲಿಕ್ಕೆ ? ಈ ಸಂಗತಿ ಮಾತ್ರ ಯಾರಿಗೂ ಗೊತ್ತಾಗದಂತೆ ಜಾಗರೂಕಳಾಗಿರು. ನೀನು ಹೆದರದೆ ಧೈರ್ಯದಿಂದಿದ್ದರೆ ಯಾರಿಗೂ ಗೊತ್ತಾಗದು. ಹೆದರಿಕೊಂಡಿದ್ದರೇ ಯಾರಿಗಾದರೂ ಸಂದೇಹ ಬರೋದು." ಎಂದನು ಪಿಂಗಳ.

ಆ ರಾತ್ರಿ ಪಿಂಗಳನಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಬೆಳಬೆಳಗಾಗುವುದರೊಳಗೆ ಮೀನಿನ ಬಲೆಯನ್ನು ಭುಜದ ಮೇಲೆ ಹಾಕಿಕೊಂಡು ಶುಕಸರೋವರದ ಕಡೆಗೆ ಹೋದನು. ನೀರಿಗೆ ಬಲೆಬೀಸುವ ಕೆಲಸ

ಮಾಡುತ್ತಿದ್ದರೂ ದೃಷ್ಟಿಯೂ ಲಕ್ಷ್ಯವೂ ದೂರ ಮೈದಾನದ ಕಡೆಗೇ ಓಡುತ್ತಿದ್ದಿತು.

ಸರಿಯಾಗಿ ಹೊತ್ತು ನೆತ್ತಿಗೆ ಬರುವ ವೇಳೆಯಲ್ಲಿ ಮೈದಾನನ ಕಡೆಯಿಂದ ಧೂಳೆಬ್ಬಿಸುತ್ತ ಒಬ್ಬ ಕುದುರೆ ಸವಾರನು ಬರುವುದು ಪಿಂಗಳನ ಕಣ್ಣಿಗೆ ಬಿತ್ತು. ನೋಡನೋಡುತ್ತಿದ್ದಂತೆ ಅವನು ಅಲ್ಲಿಗೇ ಬಂದು, "ಪಿಂಗಳಾ! ನನ್ನ ಹೆಸರು ಪದ್ಮಪಾದ. ನನಗೊಂದು ಸಹಾಯ ಮಾಡಬೇಕು ನೀನು! ಸಿದ್ಧನಾಗಿರುವೆಯಷ್ಟೆ?" ಎಂದನು.

"ಓ! ಸಹಾಯಕ್ಕೇನು, ಮಾಡುತ್ತೇನೆ. ಈ ಸರೋವರದಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಳ್ಳಬೇಕೆಂಬ ಪ್ರತಿಯೊಬ್ಬರಿಗೂ ಸಹಾಯ ಮಾಡುವುದೇ ನನ್ನ ಕೆಲಸ. ಅದಕ್ಕೆ ನೀವು ಮುನ್ನೂರು ಮೊಹರಿ ಕೊಡಬೇಕಾಗುತ್ತದೆ. ಅದಕ್ಕಿಂತ ಕಡಿಮೆಗೆ ಇನ್ನು ಸಾಧ್ಯವಿಲ್ಲ" ಎಂದನು ಪಿಂಗಳ.

"ಅದಕ್ಕೇನು? ನಾನು ಸತ್ತುಹೋದರೆ ಮುನ್ನೂರು ಮೊಹರಿಗಳನ್ನು ಕಾಂಚನ ಮಿಶ್ರರು ನಿನಗೆ ಕೊಡುತ್ತಾರೆ" ಎಂದು ಪದ್ಮಪಾದನು ನೆಗಾಡಿ ಕುದುರೆಯ ಬೆನ್ನಿನಲ್ಲಿ ನೇತಾಡುತ್ತಿದ್ದ ಹಗ್ಗವನ್ನು ತೆಗೆದು ಪಿಂಗಳನ ಕೈಗೆ ಕೊಟ್ಟನು.

ಪಿಂಗಳನು ಹಗ್ಗ ತೆಗೆದುಕೊಂಡು ಪದ್ಮಪಾದನ ಕೈಗಳನ್ನು ಬೆನ್ನಿಗೆ ತಿರುವಿ ಜೋಡಿಸಿ ಕಟ್ಟಿ, ಅವನನ್ನು ಎತ್ತಿ ಹೆಗಲಿಗೆ ಹಾಕಿಕೊಂಡು ಸರಸ್ಸಿನ ತೀರಕ್ಕೆ ಒಯ್ದು, ಸರೋವರದೊಳಗೆ ಬೀಸಿ ಹಾಕಿದ ಕೂಡಲೇ "ಮುಗಿಯಿತು ಇವನ ಕತೆ! ಇನ್ನು ತಲೆ ಎತ್ತುವುದೆಲ್ಲಿ ಬಂತು?" ಎನ್ನುತ್ತಾ ಹಿಂದಿರುಗಿ ಕುದುರೆಯ ಬಳಿಗೆ ಹೋದನು.

ಪಿಂಗಳನು ಸರೋವರದ ಕಡೆಗೆ ನೋಡುವ ಗೊಡವೆಗೇ ಹೋಗದೆ, ಕುದುರೆಯನ್ನು ಹತ್ತಿ ಹೊರಡಲು ನೋಡುವಾಗ, ಸರೋವರದಿಂದ ಪದ್ಮಪಾದನ ಕೂಗು ಕೇಳಿಸಿತು. "ಪಿಂಗಳಾ! ನನ್ನನ್ನು ಬೇಗ ಬಲೆ ಬೀಸಿ. ತೀರಕ್ಕೆ ಎಳೆದುಕೋ ನಿನಗೆ ಪುಣ್ಯ ಬರುತ್ತೆ. ಬೇಗ ಬಾ!" ಎಂದು ಅವನು ಗಟ್ಟಿಯಾಗಿ ಕೂಗ ತೊಡಗಿದನು.



ಪಿಂಗಳನು ಕುದುರೆಯ ಮೇಲಿನಿಂದ ಕೆಳಗೆ ಧುಮುಕಿ, ದಾಪುಗಾಲೋಟದಿಂದ ಬಂದು ಸರೋವರಕ್ಕೆ ಬಲೆ ಬೀಸಿ ಎಳೆದನು. ಪದ್ಮಪಾದನು ತೇಕುತ್ತ, ಆಯಾಸಪಡುತ್ತ ತೀರಕ್ಕೆ ಬಂದುಬಿದ್ದನು. ಅವನ ಕೈಯಲ್ಲಿ ಎರಡು ಮೊಸಳೆ ಮರಿಗಳಿದ್ದುವು.

ಪಿಂಗಳನು ಆಶ್ಚರ್ಯದಿಂದ ಮೊಸಳೆಯ ಮರಿಗಳನ್ನು ನೋಡಿ ಏನೋ ಕೇಳಬೇಕೆಂದಿರಲು, ಪದ್ಮಪಾದನು ಕುದುರೆಯ ಬಳಿಗೆ ಹೋಗಿ, ಅದರ ಮೇಲಿದ್ದ ಚೀಲದೊಳಗಿನಿಂದ ಒಂದು ಗಾಜಿನ ಜಾಡಿಯನ್ನು ಹೊರ ತೆಗೆದು, ಮೊಸಳೆಯ ಮರಿಗಳನ್ನು ಅದರೊಳಗೆ ಹಾಕಿ ಮುಚ್ಚಿದನು.

ಪಿಂಗಳನು ಪದ್ಮಪಾದನನ್ನೂ, ಮೊಸಳೆ ಮರಿಗಳನ್ನೂ ಅನುಮಾನದಿಂದ ನೋಡುತ್ತ, "ಪದ್ಮಪಾದರೆ ! ನೀವು ಬಹಳ ಅದೃಷ್ಟವಂತರೇ ಸರಿ. ಬದುಕಿ ಹೊರಬಿದ್ದಿದ್ದೀರಿ, ಅದು ಸರಿ. ಈಗ ನನಗೆ ಮುನ್ನೂರು ಮೊಹರಿ ಸಿಗಬೇಕಷ್ಟೆ ? ಅದಕ್ಕೇನು ಹೇಳುವಿರಿ ?" ಎಂದು ಕೇಳಿದನು.

ಪದ್ಮಪಾದನು ಆಪ್ಯಾಯತೆಯಿಂದ ಪಿಂಗಳನನ್ನು ಆಲಿಂಗಿಸಿ, "ಪಿಂಗಳಾ, ನಿನಗೆ ಆ ಮುನ್ನೂರು ಮೊಹರಿಗಳೇನು ಬಿಡು. ಲಕ್ಷ ಕೋಟಿ ಮೊಹರಿಗಳನ್ನು ಕೊಡುತ್ತೇನೆ. ನಿನ್ನನ್ನು ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಧನವಂತನಾಗಿ ಮಾಡುತ್ತೇನೆ. ನೀನು ಮಾತ್ರ ನನ್ನ ಜತೆಯಲ್ಲಿ ಭಲ್ಲೂಕ ಪರ್ವತಗಳವರೆಗೆ ಬರಬೇಕಾಗಿರುತ್ತದೆ" ಎಂದನು.

"ಭಲ್ಲೂಕ ಪರ್ವತಗಳ ವರೆಗೋ ? ಅಬ್ಬೋ! ಆ ಹೆಸರು ಕೇಳಿದರೇನೆ ನನಗೆ ಭಯ. ನನ್ನ ಅಮ್ಮ ಆ ಪರ್ವತಗಳನ್ನು ಕುರಿತು ಬಹಳ ಸಮಾಚಾರ ಹೇಳಿದ್ದಾಳೆ, ಆ ಬೆಟ್ಟಗಳು ಪಿಶಾಚಗಳಿಗೆ ನಿಲಯವೆಂದು ಕೇಳಿದ್ದೇನೆ" ಎಂದನು ಪಿಂಗಳ.

"ಪಿಶಾಚಗಳೂ ದೆವ್ವಗಳೂ ಭೂತಗಳೂ ನಿನ್ನನ್ನು ಏನು ಮಾಡಲೂ ಸಾಧ್ಯವಿಲ್ಲ; ಈ ಪ್ರಪಂಚದಲ್ಲಿ ಮೂವರೆಂದರೆ ಮೂವರೇ ದೊಡ್ಡ ಮಾಂತ್ರಿಕರಿದ್ದಾರೆ. ಅವರಲ್ಲಿ ಇಬ್ಬರನ್ನು ಸ್ವತಃ ನೀನೇ ಈ ಸರೋವರಕ್ಕೆ ಬಲಿಕೊಟ್ಟಿರುವೆ. ಈಗ



ಉಳಿದವನು ನಾನೊಬ್ಬನೇ. ನನಗಿಂತ ಹೆಚ್ಚಿನವನು ಇನ್ನು ಮೇಲೆ ಹುಟ್ಟಬೇಕು" ಎಂದನು ಪದ್ಮಪಾದ.

"ಅದೇನೋ ನನಗೊಂದೂ ಅರ್ಥವಾಗಲಿಲ್ಲ" ಎಂದನು ಪಿಂಗಳ.

"ಹಾಗಾದರೆ ನೀನು ನನಗೆ ಸಹಾಯಕನಾಗಬೇಕಾಗಿರುವುದರಿಂದ ನಿನಗೆ ಎಲ್ಲಾ ಸಂಗತಿಯನ್ನೂ ಹೇಳುತ್ತೇನೆ, ಕೇಳು" ಎಂದು ಪದ್ಮಪಾದನು ಹೀಗೆ ಹೇಳಲು ತೊಡಗಿದನು:

"ನಾವು ಮೂರು ಜನರು ಅಣ್ಣ ತಮ್ಮಂದಿರು. ನಮ್ಮ ತಂದೆ ದೊಡ್ಡ ಮಂತ್ರವೇತ್ತರು. ಅವರು ತಮ್ಮ ಮಂತ್ರಶಕ್ತಿಯಿಂದ ಅನೇಕರಿಗೆ ಒಳಿತು ಮಾಡಿದ್ದಾರೆ. ಕೆಲವರಿಗೆ ಕೆಡುಕು ಕೂಡಾ ಮಾಡಿದ್ದಾರೆ. ಅವರು ನಾವು ಮೂವರಿಗೂ ಚಿಕ್ಕಂದಿನಿಂದಲೇ ಸ್ವಲ್ಪವೂ ಪಕ್ಷಪಾತ ತೋರಿಸದೆ ಮಂತ್ರವಿದ್ಯೆಗಳಲ್ಲಿ ಪ್ರವೇಶ ಗೊಳಿಸಿ ಚೆನ್ನಾಗಿ ಕಲಿಸಿಕೊಟ್ಟಿದ್ದಾರೆ. ಅವರು ವೃದ್ಧಾಪ್ಯಕ್ಕೆ ಪ್ರವೇಶಿಸುವಾಗಲೇ ತೀರಿ ಹೋದರು. ಸಾಯುವ ಮೊದಲು ಇರುವ ಆಸ್ತಿಪಾಸ್ತಿಗಳನ್ನೆಲ್ಲಾ ನಾವು ಮೂವರಿಗೂ ಸರಿಸಮವಾಗಿ ಹಂಚಿಕೊಟ್ಟರು. ಆದರೆ ಅವರು ತಮಗೆ ತಿಳಿದ ಮಂತ್ರವಿದ್ಯೆಗಳನ್ನೆಲ್ಲಾ ಬರೆದಿಟ್ಟ ಪುಸ್ತಕವನ್ನು ಮಾತ್ರ ನಮಗಾರಿಗೂ ಕೊಡದೆ, 'ನಿಮ್ಮಲ್ಲಿ ಯಾರು ಹೆಚ್ಚಿನ ಶಕ್ತಿಶಾಲಿಯೋ ಅವರಿಗೆ ಅದು ಸಿಗುತ್ತದೆ' ಎಂದು ಹೇಳಿ ಸತ್ತುಹೋದರು. ಅವರು ಸತ್ತ ಮರುಕ್ಷಣದಿಂದಲೇ ನಾವು ಅಣ್ಣ ತಮ್ಮಂದಿರೊಳಗೆ ಮೇಲಾಟದ ಸ್ಪರ್ಧೆ ಶುರುವಾಯಿತು. ನಮ್ಮಲ್ಲಿ ಪ್ರತಿಯೊಬ್ಬನಿಗೂ ಆ ಮಂತ್ರ ಗ್ರಂಥವನ್ನು ತನ್ನದಾಗಿ ಮಾಡಿಕೊಳ್ಳಬೇಕೆಂಬ ಹಟ ಹುಟ್ಟಿತು. ಒಬ್ಬರ ಮೇಲೊಬ್ಬರು ಮಂತ್ರಶಕ್ತಿಯನ್ನು ಪ್ರಯೋಗಿಸಲು ತಯಾರಾದೆವು.

ಅಣ್ಣ ತಮ್ಮಂದಿರು ಒಬ್ಬರನ್ನೊಬ್ಬರು ನಾಶಪಡಿಸಲು ಸಿದ್ಧರಾಗುವ ಸಮಯದಲ್ಲಿ, ನಮ್ಮ ತಂದೆಗೆ ಮಂತ್ರ ವಿದ್ಯೆ ಕಲಿಸಿದ ಗುರುಗಳು ನಮ್ಮ ಮನೆಗೆ ಬಂದರು, ಅವರು ನಮ್ಮ ಜಗಳಾಟ ನೋಡಿ, ಬಹಳ ಖೇದಗೊಂಡರು. ಮೂವರನ್ನೂ ಒಂದು ಕಡೆಯಲ್ಲಿ ಕುಳ್ಳಿರಿಸಿ, 'ನಿಮ್ಮ ತಂದೆ ಬಿಟ್ಟು ಹೋದ ಆ ಪುಸ್ತಕವನ್ನು ಕುರಿತು ನಿಮಗೇನೂ ತಿಳಿಯದು. ಆದ್ದರಿಂದಲೇ ಜಗಳಕ್ಕೆ ಬಿದ್ದಿದ್ದೀರಿ. ನಿಮ್ಮಲ್ಲಿ ಯಾರು ಹೆಚ್ಚಿನ ಶಕ್ತಿವಂತರಾದರೆ ಅವರಿಗೆ ಆ ಪುಸ್ತಕ ಲಭಿಸುತ್ತದೆಂದು ನಿಮ್ಮ ತಂದೆ ಹೇಳಿದ್ದಾರಷ್ಟೆ ? ಆದ್ದರಿಂದ ಆ ಪುಸ್ತಕದಲ್ಲಿರುವ ಮಂತ್ರಶಕ್ತಿಗಳು ನಿಮ್ಮ ಆಧೀನಕ್ಕೆ ಬರಬೇಕಾದರೆ. ಮೊದಲು ನೀವು ಸಾಧಿಸಬೇಕಾದುದು ಬಹಳವಿದೆ' ಎಂದರು. ಅದೇನೆಂದು ಅವರನ್ನು ಕೇಳಿದೆವು. ಅವರು ಆ ವಿವರಗಳನ್ನು ಕುರಿತು ಹೀಗೆಂದರು : —(ಇನ್ನೂ ಇದೆ)

